ಕನ್ನಡ ಗ್ರಂಥಮಾಲೆ—೭೮

# ಟಿ. ಚೌಡಯ್ಯನವರ ಕೃತಿಗಳು

ಸಂ: ವಿ. ರಾಮರತ್ನಂ




1975

*T. Chowdayyanavara Kritigalu*—Musical Compositions of Sri T. Chowdaiah of Mysore. Edited by Prof. V. Ramaratnam, First Published by the Director, Prasaranga, University of Mysore, Mysore—570012, 1975, Crown Quarto. pp. viii+60.

**Price : Rs. 10-00**



ಮೊದಲನೆಯ ಮುದ್ರಣ 1975

**ಬೆಲೆ : ರೂ. 10-00**

ಪ್ರಕಾಶಕರು : ನಿರ್ದೇಶಕರು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು—೫೭೦೦೧೨

ಮುದ್ರಕರು : ಜಿ. ಆರ್. ದಾಸಪ್ಪ, ಶ್ರೀ ರಘುವೀರ್ ಪ್ರಿಂಟಿಂಗ್ ಪ್ರೆಸ್, ಮೈಸೂರು—೪

# ಮುನ್ನುಡಿ

ಮೈಸೂರಿನ ಸಂಗೀತ ಕಲಾನಿಧಿ ಟಿ. ಚೌಡಯ್ಯನವರ ಕೃತಿಗಳನ್ನು ವಾಚಕರ ಕೈಗೊಪ್ಪಿಸಲು ಸಂತೋಷವಾಗುತ್ತದೆ. ಪ್ರಖ್ಯಾತರಾದ ವಿದ್ವಾಂಸರೂ, ಆದರ್ಶ ಗುರುಗಳೂ ಆಗಿದ್ದ ಚೌಡಯ್ಯನವರು ಹಲವಾರು ಜನ ಸಮರ್ಥ ಶಿಷ್ಯರನ್ನು ತಯಾರುಮಾಡಿದುದೇ ಅಲ್ಲದೆ ಕೃತಿಗಳನ್ನೂ ರಚಿಸಿದ್ದರು. ಅವುಗಳನ್ನು ಪ್ರಸ್ತುತ ರೀತಿಯಲ್ಲಿ ಸಂಪಾದಿಸಿ ಸಂಕಲಿಸಿ ಕೊಟ್ಟಿರುವ ಪ್ರೊಫೆಸರ್ ವಿ. ರಾಮರತ್ನಂ ಅವರಿಗೆ ಕೃತಜ್ಞತೆಗಳು ಸಲ್ಲುತ್ತವೆ. ಕೃತಿಯನ್ನು ಸುಂದರವಾಗಿ ಅಚ್ಚುಮಾಡಿಕೊಟ್ಟಿರುವ ಶ್ರೀ ಜಿ. ಆರ್. ದಾಸಪ್ಪನವರಿಗೂ, ಛಾಯಾಚಿತ್ರಗಳನ್ನು ಒದಗಿಸಿಕೊಟ್ಟ ಶ್ರೀಮತಿ ರಾಜಮ್ಮ ಸಿ. ಆರ್. ಗೌಡ ಮತ್ತು ಶ್ರೀಮಾನ್ ಶ್ರೀಕಂಠಯ್ಯ ಅವರಿಗೂ, ಎಂದಿನಂತೆ ನಮಗೆ ಸಹಕಾರ ನೀಡಿ ಆಕರ್ಷಕ ರಕ್ಷಾಪುಟ ಸಿದ್ಧಪಡಿಸಿಕೊಟ್ಟಿರುವ ಶ್ರೀ ಕೆ. ಎಲ್. ವೆಂಕಟೇಶ್ ಅವರಿಗೂ ಆಭಾರಿಗಳಾಗಿದ್ದೇವೆ.

ಮೈಸೂರು
10–1–1975

ಪ್ರಭುಶಂಕರ
ನಿರ್ದೇಶಕ

## ಪರಿವಿಡಿ

# ಸಂಗೀತ ಕಲಾನಿಧಿ ಟಿ. ಚೌಡಯ್ಯನವರು

ಮೈಸೂರಿಗೆ ಹದಿನೆಂಟು ಮೈಲಿ ದೂರದ ತಿರುಮಕೂಡಲು–ನರಸೀಪುರ ಚೌಡಯ್ಯನವರ ಜನ್ಮಸ್ಥಳ. 1895ನೆಯ ವರ್ಷದಲ್ಲಿ ಶ್ರೀ ಅಗಸ್ತ್ಯಗೌಡರು ಮತ್ತು ಸೌ. ಸುಂದರಮ್ಮನವರ ಮಗನಾಗಿ ಅವರು ಹುಟ್ಟಿದರು. ತಂದೆ ತಾಯಿ ಇಬ್ಬರೂ ಉಜ್ವಲ ಸಂಗೀತ ಪ್ರೇಮಿಗಳು. ಜೊತೆಗೆ ಸಂಸ್ಕೃತವನ್ನೂ ಬಲ್ಲವರು. ಹೀಗಾಗಿ ಚೌಡಯ್ಯನವರಿಗೆ ಬಾಲ್ಯದಲ್ಲಿಯೇ ಸಂಗೀತ ಶಿಕ್ಷಣ ತಾಯಿಯಿಂದಲೇ ದೊರಕಿತು. ಲೌಕಿಕ ಶಿಕ್ಷಣಕ್ಕಾಗಿ ನರಸೀಪುರದ ಶಾಲೆಗೆ ಹೋಗುತ್ತಿದ್ದರು ಚೌಡಯ್ಯ. ಒಮ್ಮೆ ಅಹೋಬಲಾಚಾರ್ಯರೆಂಬ ಜ್ಯೋತಿಷಿ ಇವರನ್ನು ನೋಡಿ " ನಿನ್ನ ಭವಿಷ್ಯವು ಸಂಗೀತದಲ್ಲಿದೆಯೇ ಹೊರತು ಇದರಲ್ಲಿಲ್ಲ " ಎಂದು ಹೇಳಿ ಹುಡುಗನ ಕೈಯಿಂದ ಪುಸ್ತಕಗಳನ್ನು ಕಿತ್ತು ನದಿಗೆ ಎಸೆದುಬಿಟ್ಟರಂತೆ. ತಾಯಿಯೂ ಈ ಭವಿಷ್ಯ ವಾಣಿಯನ್ನು ನಂಬಿ ತಮ್ಮ ಸೋದರನೊಂದಿಗೆ ಚೌಡಯ್ಯನವರನ್ನು ಮೈಸೂರಿಗೆ ಕಳುಹಿಸಿಕೊಟ್ಟರು.

1910ರಿಂದ ಚೌಡಯ್ಯನವರು ಅಂದಿನ ಕಾಲಕ್ಕೆ ವಿಶೇಷ ಖ್ಯಾತಿ ಗಳಿಸಿದ್ದ ಬಿಡಾರಂ ಕೃಷ್ಣಪ್ಪನವರ ಬಳಿ ಪಿಟೀಲು ಕಲಿಯಲಾರಂಭಿಸಿದರು. ಅಂದು ಪ್ರಾರಂಭವಾದ ಕಟ್ಟುನಿಟ್ಟಾದ ಶಿಕ್ಷಣ ಹದಿನೆಂಟು ವರ್ಷ ಸತತವಾಗಿ ಸಾಗಿ ಆಮೇಲೆ ಸ್ವತಂತ್ರವಾಗಿ ಕಚೇರಿಗಳನ್ನು ಮಾಡಲು ಮತ್ತು ಪಕ್ಕವಾದ್ಯ ನುಡಿಸಲು ಗುರುಗಳ ಅನುಮತಿ ಚೌಡಯ್ಯನವರಿಗೆ ದೊರಕಿತು. ಬಿಡಾರಂ ಕೃಷ್ಣಪ್ಪನವರು ತಮ್ಮ ಪ್ರತಿಯೊಂದು ಕಚೇರಿಗೂ ಇವರನ್ನು ಕರೆದುಕೊಂಡು ಹೋಗುತ್ತಿದ್ದರು. ಹಲವು ಬಾರಿ ತಮಗೇ ಪಕ್ಕವಾದ್ಯ ನುಡಿಸುವ ಅವಕಾಶವನ್ನೂ ಕೊಟ್ಟರು. ತಿರುಕ್ಕೋಡಿಕಾವಲ್ ಕೃಷ್ಣಯ್ಯರ್, ಗೋವಿಂದಸ್ವಾಮಿ ಪಿಳ್ಳೈ, ಅಳಗರ್‌ನಂಬಿ ಪಿಳ್ಳೈ, ದಕ್ಷಿಣಾಮೂರ್ತಿ ಪಿಳ್ಳೈ ಮೊದಲಾದ ಸುಪ್ರಸಿದ್ಧ ವಿದ್ವಾಂಸರು ಪಕ್ಕವಾದ್ಯ ನುಡಿಸುತ್ತಿದ್ದ ಬಿಡಾರಂ ಕೃಷ್ಣಪ್ಪನವರಿಗೆ ಪಕ್ಕವಾದ್ಯ ನುಡಿಸುವುದು ಸುಲಭದ ಮಾತಾಗಿರಲಿಲ್ಲ. ಅಲ್ಪಸ್ವಲ್ಪಕ್ಕೆ ಗುರುಗಳು ಒಪ್ಪುತ್ತಲೂ ಇರಲಿಲ್ಲ. ಸಭೆಯಲ್ಲೇ ಅಷ್ಟು ಜನರ ಎದುರಿಗೇ ಶಿಷ್ಯನ ಲೋಪವನ್ನು ತೋರಿಸಿ ದಂಡಿಸಲು ಅವರು ಹಿಂದುಮುಂದು ನೋಡುತ್ತಿರಲಿಲ್ಲ. ಅಂತಹ ಘಟನೆ ಚೌಡಯ್ಯನವರ ಗುರುಭಕ್ತಿಯನ್ನು ಇಮ್ಮಡಿ ನೂರ್ಮಡಿ ಮಾಡಿತು ಅಷ್ಟೆ. ಕೃಷ್ಣಪ್ಪನವರು ತಮಗೆ ಪಕ್ಕವಾದ್ಯ ನುಡಿಸುತ್ತಿದ್ದ ತಿರುಚಿ ಗೋವಿಂದಸ್ವಾಮಿ ಪಿಳ್ಳೈಯವರ ಶೈಲಿಯನ್ನು ಅನುಸರಿಸುವಂತೆ ಚೌಡಯ್ಯನವರಿಗೆ ಹೇಳುತ್ತಿದ್ದರು. ಪಿಳ್ಳೈಯವರ ರಾಗ ನಿರೂಪಣೆ, ತಾನವನ್ನು ನುಡಿಸುವಾಗ ಅವರು ಬೆರಳುಗಳನ್ನು ಉಪಯೋಗಿಸುತ್ತಿದ್ದ ವಿಧಾನ, ಕಮಾನು ಹಾಕುತ್ತಿದ್ದ ರೀತಿ ಇವುಗಳನ್ನು ಗ್ರಹಿಸುವುದೇ ತಮ್ಮ ಮುಖ್ಯ ಗುರಿಯಾಗಿರುತ್ತಿತ್ತೆಂದು ಚೌಡಯ್ಯನವರು ಅನೇಕ ಬಾರಿ ಹೇಳಿದ್ದಾರೆ.

ಪಿಟೀಲು ವಾದನದಲ್ಲಿ ವಿಶೇಷ ನೈಪುಣ್ಯ ಪಡೆದುದು ಮಾತ್ರವಲ್ಲದೆ ಚೌಡಯ್ಯನವರು ಅದುವರೆಗೆ ನಾಲ್ಕು ತಂತಿಗಳನ್ನು ಕಟ್ಟುತ್ತಿದ್ದ ಪಿಟೀಲಿಗೆ ಏಳು ತಂತಿಗಳನ್ನು ಅಳವಡಿಸಿ ಹೊಸ ಶೋಧನೆಯನ್ನೇ ನಡೆಸಿದರು. ಧ್ವನಿವರ್ಧಕ ಯಂತ್ರದ ಬಳಕೆ ಇರದಿದ್ದ ಆ ಕಾಲದಲ್ಲಿ ನಾಲ್ಕು ತಂತಿ ಪಿಟೀಲಿನ ದುರ್ಬಲ ನಾದದ ಅಂಶ ಅವರ ಮನಸ್ಸನ್ನು ತಟ್ಟಿರಬೇಕು. ಏಳು ತಂತಿಗಳನ್ನು ಅಳವಡಿಸಿ ಅಪಾರ ಸಾಧನೆಯಿಂದ ಅದರ ಬಳಕೆಯನ್ನು ಪ್ರಚುರಗೊಳಿಸಿದರು ಚೌಡಯ್ಯ. ಬೇಗನೆ ಶಿಷ್ಯನ ಪ್ರಯೋಗ ಗುರುಗಳ ಹಾಗೂ ವಿದ್ವಾಂಸರು ಮತ್ತು ಶ್ರೋತೃಗಳ ಮೆಚ್ಚುಗೆ ಗಳಿಸಿತು. ಆದರೆ ಹೊಸತೊಂದು ಕಾಣಿಸಿದಾಗ ಅದಕ್ಕೆ ಸಂಪ್ರದಾಯದ ವಿರೋಧ ಎದ್ದೇ ಏಳುತ್ತದೆ. ಮದರಾಸಿನ ಸಂಗೀತ ಅಕಾಡೆಮಿಯಲ್ಲಿ " ಈ ಪಿಟೀಲು ಶಾಸ್ತ್ರಸಮ್ಮತವಾಗಿಲ್ಲವೆಂದೂ, ಶುದ್ಧ ಸ್ವರಗಳು ಅದರಿಂದ ಹೊರಹೊಮ್ಮಲು ಸಾಧ್ಯವಿಲ್ಲವೆಂದೂ, ಅದನ್ನು ಬಹಿಷ್ಕರಿಸಬೇಕೆಂದೂ " ಅಭಿಪ್ರಾಯಗಳು ಬಂದು ವಿದ್ವಾಂಸರಲ್ಲಿ ಜಿಜ್ಞಾಸೆಯುಂಟುಮಾಡಿದುವು. ಆದರೆ ತಮ್ಮ ನೂತನ ಪ್ರಯೋಗದಲ್ಲಿ ಚೌಡಯ್ಯನವರಿಗೆ ಅಪಾರವಾದ ಆತ್ಮ ವಿಶ್ವಾಸವಿತ್ತು. ವಿದ್ವಾಂಸರ ಸಮ್ಮತಿ ಅದಕ್ಕೆ ಸಿಕ್ಕಿಯೇ ತೀರುತ್ತದೆಂಬ ನಂಬಿಕೆಯಿತ್ತು. ವಿರೋಧವಾದಿಗಳು ಸೋಲೊಪ್ಪಬೇಕಾಯಿತು. ಏಳು ತಂತಿಗಳ ಈ ಪಿಟೀಲು ಧ್ವನಿಮಾಧುರ್ಯದಿಂದ ಪ್ರಧಾನ ಗಾಯಕರಿಗೆ ಪೋಷಣೆ ಒದಗಿಸುತ್ತಿದ್ದುದರ ಜೊತೆಗೆ ಎಷ್ಟೋ ವೇಳೆ ಶ್ರುತಿಗೆ ಅಳವಡಲು ಕಷ್ಟವಾಗುವ ಶಾರೀರಗಳಿಗೆ ತುಂಬುನಾದದ ಮೂಲಕ ಸಹಾಯ ಮಾಡಿ ಶ್ರುತಿ ಶುದ್ಧವಾಗುವಂತೆ ಸಹಕಾರ ನೀಡುತ್ತಿದ್ದಿತು. ಅದರಿಂದಾಗಿ ಅನೇಕಾನೇಕ ಪ್ರಸಿದ್ಧ ವಿದ್ವಾಂಸರು ಚೌಡಯ್ಯನವರನ್ನೇ ಪಕ್ಕವಾದ್ಯಕ್ಕಾಗಿ ಕೋರುತ್ತಿದ್ದರು.

ತಮ್ಮ ಗುರುಗಳಿಗೆ ಪಕ್ಕವಾದ್ಯವಾಗಿ ಪಿಟೀಲು ನುಡಿಸಿ ಅನುಭವ ಪಡೆದಮೇಲೆ ಚೌಡಯ್ಯನವರು ಇತರ ವಿದ್ವಾಂಸರಿಗೂ ಆ ನೆರವು ನೀಡಲು ಮುಂದಾದರು. ಮೊದಲು ಹಾಗೆ ಪಕ್ಕವಾದ್ಯ ನುಡಿಸಿದ್ದು ಪದ್ಮಭೂಷಣ ಅರಿಯಕುಡಿ ರಾಮಾನುಜಯ್ಯಂಗಾರ್ಯರಿಗೆ. ಅಂದು ತಮ್ಮ ಅಮೋಘ ಪಾಂಡಿತ್ಯದಿಂದ ವಿದ್ವಜ್ಜನರ ಮೆಚ್ಚುಗೆ ಪಡೆದುದಲ್ಲದೆ ಚೌಡಯ್ಯನವರು ರಾಮಾನುಜಯ್ಯಂಗಾರ್ಯರಿಂದಲೂ ಪ್ರಶಂಸೆ ಪಡೆದರು. ಪಾಂಡಿತ್ಯಪೂರ್ಣವೂ, ಸಂಪ್ರದಾಯಬದ್ಧವೂ ಆದ ಶೈಲಿಯ ರಾಮಾನುಜಯ್ಯಂಗಾರ್ಯರ ಮೆಚ್ಚುಗೆ ಚೌಡಯ್ಯನವರಿಗೆ ಹೆಮ್ಮೆಯ ವಿಷಯವೇ ಆಗಿತ್ತು. ಅರಿಯಕುಡಿ–ಚೌಡಯ್ಯ–ದಕ್ಷಿಣಾಮೂರ್ತಿ ಪಿಳ್ಳೆ ಅಥವಾ ಪಾಲಘಾಟ್ ಮಣಿ ಅಯ್ಯರ್ ಈ ವೃಂದದ ಕಛೇರಿಗಳು ದಕ್ಷಿಣ ಭಾರತದಲ್ಲೆಲ್ಲ ತುಂಬ ಪ್ರಸಿದ್ಧವಾದುವು.

ಮೈಸೂರು ಸದಾಶಿವರಾಯರ ಕೃತಿಗಳನ್ನು ವಿಶೇಷವಾಗಿ ಪ್ರಚಾರಕ್ಕೆ ತಂದ ಶ್ರೀ ರಾಮಭಾಗವತರಿಗೂ ಚೌಡಯ್ಯನವರು ಪಕ್ಕವಾದ್ಯವಾಗಿ ಪಿಟೀಲು ನುಡಿಸಿದರು. ಇಂದಿಗೂ ಅವರ ಪಿಟೀಲಿನ ಪಕ್ಕವಾದ್ಯವನ್ನು ಶ್ಲಾಘಿಸುವ ಹಿರಿಯ ವಿದ್ವಾಂಸರು ಶ್ರೀ ಚೆಂಬೈ ವೈದ್ಯನಾಥ ಭಾಗವತರು. ಎಂಭತ್ತನ್ನು ಮುಟ್ಟಿರುವ ಈ ಇಳಿವಯಸ್ಸಿನಲ್ಲಿಯೂ ಅಮೋಘ ಕಂಠಶ್ರೀಯನ್ನು ಪಡೆದಿರುವ ಚೆಂಬೈ ಮುಕ್ತಕಂಠದಿಂದ ಚೌಡಯ್ಯನವರ ವಾದನವನ್ನು ಪ್ರಶಂಸಿಸುತ್ತಾರೆ.

ಮೈಸೂರಿನಲ್ಲೇ ಬಹುಕಾಲ ನೆಲಸಿ ಸಹೃದಯರನ್ನು ಸಂಗೀತ ಸುಧೆಯಿಂದ ತಣಿಸಿದ ಟೈಗರ್ ವರದಾಚಾರ್ಯರಿಗೆ ಪಕ್ಕವಾದ್ಯ ನುಡಿಸುವುದು ಚೌಡಯ್ಯನವರಿಗೆ ಹಿಗ್ಗಿನ ವಿಷಯವಾಗಿರುತ್ತಿತ್ತು. ಹಾಗೆಯೇ ಇವರ ಪಿಟೀಲಿಗೆ ಮನಸೋತ ಇನ್ನೊಬ್ಬ ಶ್ರೇಷ್ಠ ವಿದ್ವಾಂಸರು ಪದ್ಮಭೂಷಣ ಕೆ. ವಾಸುದೇವಾಚಾರ್ಯರು. ಅವರ ಶೈಲಿಯೂ ತಮ್ಮ ಗುರುಗಳ ಶೈಲಿಯನ್ನೇ ಹೋಲುತ್ತಿದ್ದುದರಿಂದ ಚೌಡಯ್ಯನವರಿಗೆ ಆಚಾರ್ಯರಲ್ಲಿ ಅಪಾರವಾದ ಗೌರವ, ಗುರುಭಾವನೆ. ಪದ್ಮಭೂಷಣ ಶ್ರೀಮತಿ ಎಂ. ಎಸ್. ಸುಬ್ಬಲಕ್ಷ್ಮಿ ಅವರಿಗೆ ಪಕ್ಕವಾದ್ಯವನ್ನು ನುಡಿಸಲು ಹೊರಟಾಗ ಚೌಡಯ್ಯನವರು ಕೆಲವರ ಟೀಕೆಗಳಿಗೆ ಗುರಿಯಾಗಬೇಕಾಯಿತು. ಆದರೆ, ಶ್ರೀಮತಿ ಸುಬ್ಬಲಕ್ಷ್ಮಿಯವರ ಪಾಂಡಿತ್ಯಪೂರ್ಣ ಮಧುರ ಗಾಯನ, ಲಯ, ಶ್ರುತಿಶುದ್ಧಿಗಳನ್ನು ಮೆಚ್ಚಿಕೊಂಡಿದ್ದ ಚೌಡಯ್ಯನವರು ತಾವು ವಿದ್ವತ್ ಪಕ್ಷಪಾತಿಗಳೆಂಬುದನ್ನು ತೋರಿಸಿಕೊಟ್ಟರು.

ಹಿರಿಯರಂತೆಯೇ ತರುಣ ಗಾಯಕರಿಗೂ ಪಕ್ಕವಾದ್ಯವಾಗಿ ಪಿಟೀಲು ನುಡಿಸಿ ಅವರನ್ನು ಪ್ರೋತ್ಸಾಹಿಸಿದರು ಚೌಡಯ್ಯ. ಶಿಷ್ಯರಿಗೆ ಪಾಠ ಹೇಳಿಕೊಡುವಲ್ಲಿ ಅವರು ಸಂಪ್ರದಾಯವನ್ನು ಎಳ್ಳಷ್ಟೂ ಬಿಡುತ್ತಿರಲಿಲ್ಲ. ತಂತಿಗಳ ಮೇಲೆ ಕಮಾನನ್ನು ಎಳೆಯುವ ವಿಧಾನವನ್ನು ಕಲಿಸುವುದೇ ತಿಂಗಳುಗಟ್ಟಲೆ ಮುಂದುವರಿಯುತ್ತಿತ್ತು. ಕರ್ಕಶ ಧ್ವನಿ ಸಂಪೂರ್ಣವಾಗಿ ತಪ್ಪಿ ಮಧುರವಾದ ತುಂಬು ನಾದ ಹೊಮ್ಮುವಂತೆ ಕಮಾನನ್ನು ಎಳೆಯುವುದನ್ನು ಕಲಿತ ಹೊರತು ಮುಂದಿನ ಪಾಠ ಇಲ್ಲ. ಷಟ್ಕಾಲಗಳಲ್ಲಿ ಸರಳೆ ಜಂಟಿ ಸ್ವರಗಳನ್ನು ನುಡಿಸಲು ಕಲಿಯುವುದು, ಒಂದೊಂದು ಮೇಳರಾಗಕ್ಕೆ ಒಂದು ತಿಂಗಳಿನಂತೆ ಅಭ್ಯಾಸ ಮಾಡುವುದು, ಅಕ್ಷರಕ್ಕೆ ಒಂದು ಕಮಾನಿನಂತೆ ಗಮಕಪೂರ್ಣವಾಗಿ ಎಳೆದು ನುಡಿಸುವುದು—ಇವುಗಳಿಗೇ ನಾಲ್ಕಾರು ವರ್ಷಗಳು ಕಳೆಯುತ್ತಿದ್ದುವು. ಆದ್ದರಿಂದಲೆ ವಿದ್ಯಾರ್ಥಿಗೆ ಸ್ವರಜ್ಞಾನ ಅಚ್ಚಳಿಯದೆ ಮನಸ್ಸಿನಲ್ಲಿ ಬೇರು ಬಿಡುತ್ತಿತ್ತು. ತಮ್ಮ ಗುರುಗಳಿಂದ ತಾವು ಕಲಿತ ಶಿಕ್ಷಣ ಕ್ರಮವನ್ನೇ ಚಾಚು ತಪ್ಪದೆ ಅವರು ಶಿಷ್ಯರಿಗೆ ಮುಂದುವರಿಸಿದರು. ಆರ್. ಕೆ. ವೆಂಕಟರಾಮಾಶಾಸ್ತ್ರಿ, ಮದರಾಸು ವಿ. ಸೇತೂರಾಮಯ್ಯ, ಪಾಲಘಾಟ್ ಸಿ. ಆರ್. ಮಣಿ, ಚಿಟ್ಟಿನಾಡು ಅಳಗರ್‌ಸ್ವಾಮಿ ಮುಂತಾದವರು ಪಿಟೀಲು ವಾದನದಲ್ಲಿಯೂ, ಮೈಸೂರು ವಿ. ರಾಮರತ್ನಂ, ಎಚ್. ಆರ್. ಸೀತಾರಾಮಶಾಸ್ತ್ರಿ, ಎಚ್. ಎಸ್. ಅನಸೂಯಾ ಮುಂತಾದವರು ಹಾಡುಗಾರಿಕೆಯಲ್ಲಿಯೂ ಚೌಡಯ್ಯನವರ ಮುಖ್ಯ ಶಿಷ್ಯ ಶಿಷ್ಯೆಯರು. ಸಂಗೀತದ ಅಧ್ಯಾಪನಕ್ಕಾಗಿಯೇ ಮೈಸೂರು ಮತ್ತು ಬೆಂಗಳೂರುಗಳಲ್ಲಿ 'ಅಯ್ಯನಾರ್ ಸಂಗೀತ ಕಲಾಶಾಲೆ' ಗಳನ್ನು ಅವರು ಸ್ಥಾಪಿಸಿದರು.

ತಮ್ಮ ಗುರುಗಳಾದ ಕೃಷ್ಣಪ್ಪನವರು ಕಟ್ಟಿಸಿದ ಪ್ರಸನ್ನ ಸೀತಾರಾಮಮಂದಿರದ ಉಸ್ತುವಾರಿ ಆಮೇಲೆ ಚೌಡಯ್ಯನವರದಾಯಿತು. ಪ್ರತಿವರ್ಷವೂ ರಾಮನವಮಿಯ ಸಂದರ್ಭದಲ್ಲಿ ಅಪಾರ ವೈಭವದಿಂದ ಸಂಗೀತೋತ್ಸವಗಳನ್ನು ನಡೆಸಿದರು. ಸ್ಥಳೀ ಪರಸ್ಥಳಗಳಿಂದ ವಿದ್ವಾಂಸರು ದುಡ್ಡುಕಾಸಿನ ಆಸೆಯಿಲ್ಲದೆ ಕೇವಲ ಪ್ರೀತಿಯಿಂದ ಬಂದು ಇಲ್ಲಿಯ ಸಂಗೀತೋತ್ಸವದಲ್ಲಿ ಪಾಲುಗೊಳ್ಳುತ್ತಿದ್ದರು. "ಬಿಡಾರಂ ಕೃಷ್ಣಪ್ಪನವರ ರಾಮಮಂದಿರ" ದಲ್ಲಿ ಹಾಡುವುದೇ ಪರಮಭಾಗ್ಯವೆಂಬ ಭಾವನೆ ವಿದ್ವಾಂಸರಲ್ಲಿ ಪ್ರಚುರವಾಗಿತ್ತು.

ತಮಿಳುನಾಡಿನ ಲೇಖಕರೊಬ್ಬರು ಚೌಡಯ್ಯನವರ ಜೀವನಚರಿತ್ರೆ ಬರೆಯಲು ವಿಷಯ ಸಂಗ್ರಹಣೆಗಾಗಿ ಅವರ ಬಳಿಗೆ ಬಂದರು. ಆದರೆ ಚೌಡಯ್ಯನವರು ಮೊದಲು ತಮ್ಮ ಗುರುಗಳ ಜೀವನ ಚರಿತ್ರೆ ಬೆಳಕು ಕಂಡ ಹೊರತು ತಮ್ಮ ಜೀವನ ಚರಿತ್ರೆಯಲ್ಲಿ ತಮಗೆ ಆಸಕ್ತಿ ಇಲ್ಲ ಎಂದು ನಿರಾಕರಿಸಿ ಕಳುಹಿಸಿಬಿಟ್ಟರು.

ಚೌಡಯ್ಯನವರಿಗೆ ಬೇಕಾದಷ್ಟು ಸನ್ಮಾನಗಳೂ, ಪ್ರಶಸ್ತಿಗಳೂ ಸಂದುವು. 1941ರಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ಅವರಿಗೆ ' ಸಂಗೀತ ರತ್ನ ' ಎಂಬ ಬಿರುದನ್ನಿತ್ತರು. 1957ರಲ್ಲಿ ಚೌಡಯ್ಯನವರು ಮದರಾಸಿನ ಸಂಗೀತ ಅಕಾಡೆಮಿಯ ಅಧ್ಯಕ್ಷರಾದರು. ಈ ಸಂದರ್ಭದಲ್ಲಿ ' ಸಂಗೀತ ಕಲಾನಿಧಿ ' ಎಂಬ ಬಿರುದಿನಿಂದ ಅವರನ್ನು ಗೌರವಿಸಲಾಯಿತು. ಕಂಚಿಯ ಕಾಮಕೋಟಿ ಪೀಠದ ಶ್ರೀಗಳವರು ' ಪೊನ್ನಡೈ ' ಇತ್ತು ಅನುಗ್ರಹಿಸಿದರು. 1962ರಲ್ಲಿ ಮದರಾಸು, ಮೈಸೂರು ಪ್ರಾಂತದ ಕಲಾಭಿಮಾನಿಗಳು ಸೇರಿ ಕಲ್ಕತ್ತ ನಗರದಲ್ಲಿ " ವಿದ್ವಾನ್ ಸಂಗೀತರತ್ನ ಮೈಸೂರು ಟಿ. ಚೌಡಯ್ಯ ಸುವರ್ಣ ಮಹೋತ್ಸವ ಸಮಾರಂಭ " ವೊಂದನ್ನು ನಡೆಸಿದರು. ಅವರ ಕಲಾಪ್ರೌಢಿಮೆಯ ಬಗೆಗೆ ಹಲವಾರು ಲೇಖನಗಳುಳ್ಳ ಒಂದು ಸ್ಮರಣ ಸಂಚಿಕೆಯನ್ನು ಆಗ ಬಿಡುಗಡೆ ಮಾಡಲಾಯಿತು.

ಉನ್ನತಮಟ್ಟದ ವಿದ್ವಾಂಸರೂ, ಸಹೃದಯ ಕಲಾವಿದರೂ, ಶ್ರೇಷ್ಠ ಗುರುಗಳೂ ಆಗಿದ್ದುದಲ್ಲದೆ ಚೌಡಯ್ಯನವರು ವಾಗ್ಗೇಯಕಾರರೂ ಆಗಿದ್ದರು. ಕನ್ನಡ, ತೆಲುಗು, ಸಂಸ್ಕೃತಗಳಲ್ಲಿ ಹಲವು ಕೃತಿಗಳನ್ನೂ ತಿಲ್ಲಾನಗಳನ್ನೂ ' ತ್ರಿಮಕುಟವಾಸ ' ಎಂಬ ಅಂಕಿತದಿಂದ ಅವರು ರಚಿಸಿದ್ದಾರೆ. ಸರಳ ಸುಂದರವಾದ ಈ ರಚನೆಗಳಲ್ಲಿ ಹದಿನೇಳು ಕೃತಿಗಳನ್ನೂ, ಐದು ತಿಲ್ಲಾನಗಳನ್ನೂ ಪ್ರಸ್ತುತ ಪುಸ್ತಕದಲ್ಲಿ ಕೊಟ್ಟಿದೆ.

ಹಲವಾರು ವರ್ಷಗಳ ಕಾಲ ಅಂಗಸಾಧನೆಯಿಂದ ಒಳ್ಳೆಯ ನಿಲುವನ್ನು ಸಾಧಿಸಿದ್ದರು ಶ್ರೀ ಚೌಡಯ್ಯ. ಕುಳಿತರೆ ಆರೇಳು ಗಂಟೆಗಳ ಕಾಲ ಕಚೇರಿಯಲ್ಲಿ ಸ್ವಲ್ಪವೂ ಕಷ್ಟಪಡದೆ ಲೀಲಾಜಾಲವಾಗಿ ಪಿಟೀಲು ನುಡಿಸುತ್ತಿದ್ದರು. ತಮ್ಮ 70ನೆಯ ಇಳಿವಯಸ್ಸಿನಲ್ಲೂ ಇಂತಹ ದೀರ್ಘಕಾಲದ ಕಚೇರಿಗಳನ್ನು ನಡೆಸಬಲ್ಲ ಸಾಮರ್ಥ್ಯ ಅವರಿಗಿತ್ತು.

ಚೆಂಬೈ ವೈದ್ಯನಾಥ ಭಾಗವತರು ಒಮ್ಮೆ ತಮ್ಮ ಊರಿನ ಪಾರ್ಥಸಾರಥಿ ದೇವರಿಗೆ ಸ್ವರ್ಣಕವಚವೊಂದನ್ನು ಅರ್ಪಿಸಬೇಕೆಂದು ಅಂದುಕೊಂಡಿದ್ದರಂತೆ. ಅದಕ್ಕೆ ತಗಲುವ ಹಣ ಪೂರ್ತಿ ಅವರಲ್ಲಿ ಇರಲಿಲ್ಲ ಎಂಬುದು ಚೌಡಯ್ಯನವರಿಗೆ ತಿಳಿಯಿತು. ಆದರೆ ಮಿತ್ರರಿಂದ ಅವರು ಹಣವನ್ನು ಸುಮ್ಮನೆ ಸ್ವೀಕರಿಸಲಾರರೆಂಬ ವಿಷಯವೂ ಅವರಿಗೆ ಗೊತ್ತು. ತಾವು ಆಗ ತಯಾರಿಸುತ್ತಿದ್ದ ಚಲನಚಿತ್ರವೊಂದರಲ್ಲಿ ಒಂದು ಸಂಗೀತ ಕಚೇರಿಯ ದೃಶ್ಯವನ್ನು ಅಳವಡಿಸಿ, ಅದಕ್ಕೆ ಚೆಂಬೈ ಅವರನ್ನು ಒಲಿಸಿ ಆ ಮೂಲಕ ಅವರಿಗೆ ಅಗತ್ಯವಾಗಿದ್ದ ಹಣವು ದೊರಕುವಂತೆ ಮಾಡಿದರು.

ಮದರಾಸು ಸಂಗೀತ ಅಕಾಡೆಮಿಯ 37ನೆಯ ಸಮ್ಮೇಳನದಲ್ಲಿ ಮಾತನಾಡುತ್ತ ಚೌಡಯ್ಯನವರು " ಸಂಗೀತಗಾರರು ಪರಸ್ಪರ ಅಸೂಯೆಯನ್ನು ತ್ಯಜಿಸಬೇಕು. ಪಕ್ಕವಾದ್ಯಗಾರರಲ್ಲಿ ಒಂದುವೇಳೆ ದೋಷ ಕಂಡರೂ ಅದನ್ನು ಸಭಿಕರಿಗೆ ತಿಳಿಯುವಂತೆ ಮಾಡಬಾರದು. ಹಾಗೆಯೇ ಪಕ್ಕವಾದ್ಯಗಾರರೂ ಮುಖ್ಯ ಗಾಯಕರನ್ನು ಅನುಸರಿಸಿಕೊಂಡು ಗಾಯನಕ್ಕೆ ಪೋಷಣೆ ಕೊಡಬೇಕೇ ಹೊರತು ಅವರನ್ನು ಕೀಳು ಮಾಡಿ ತಾವು ಮುನ್ನುಗ್ಗಬಾರದು " ಎಂದರು. ಈ ಒಂದೊಂದು ಮಾತೂ ಚೌಡಯ್ಯನವರಲ್ಲಿದ್ದ ಸಹಕಾರ ಮನೋಭಾವವನ್ನು ತೋರಿಸುತ್ತದೆ.

1967ನೆಯ ಇಸವಿ ಜನವರಿ 19ರಂದು ಚೌಡಯ್ಯನವರು ಇಹವ್ಯಾಪಾರವನ್ನು ತ್ಯಜಿಸಿ ನಾದಬ್ರಹ್ಮನಲ್ಲಿ ಲೀನವಾದರು. ಬದುಕಿನುದ್ದಕ್ಕೂ ಮೈಸೂರಿನ, ಕರ್ನಾಟಕ ಸಂಗೀತದ ಹಿರಿಮೆ ಗರಿಮೆಗಳನ್ನು ಮೆರೆದು ಅದರ ಶ್ರೇಯಸ್ಸಿಗಾಗಿಯೇ ಬಾಳಿದ ಚೌಡಯ್ಯನವರನ್ನು ಪಡೆದ ನಾಡು ಧನ್ಯ, ಜನ ಧನ್ಯ.

—ವಿ. ರಾಮರತ್ನಂ

## ೧

ರಾಗ : ಉದಯರವಿಚಂದ್ರಿಕೆ ತಾಳ : ಆದಿ

ಪಲ್ಲವಿ : ವರಗಣಪತೇ ಮಾಂ ಪಾಹಿ

ಅನುಪಲ್ಲವಿ : ವರದಾತ ವಸುಗಣ ಪೂಜಿತ
ಕರುಣಾ ನಿಧಾನ ಗಾನಪ್ರಿಯ (ವರ)

ಚರಣ : ಜಗದಾದಿಪೂಜ್ಯ ಜಲಜಾಪ್ತ ತೇಜ
ವಿಘ್ನನಾಥ ವಿಶ್ವವರ ಕೋವಿದ
ನೃಹರೀಶ ಬ್ರಹ್ಮಾರ್ಚಿತ ಮಾನಿತ
ನತಪಾರಿಜಾತ ನಗಜಾಸುತ (ವರ)

## ೨

ರಾಗ : ಧನ್ಯಾಸಿ ತಾಳ : ಆದಿ

ಪಲ್ಲವಿ : ದೇವೀ ಪೂರ್ಣಮಂಗಳ ಕಾಮಾಕ್ಷಿ ಕರುಣಾಕಟಾಕ್ಷಿ

ಅನುಪಲ್ಲವಿ : ಪ್ರಸನ್ನವದನೆ ಮಂಜುಳರದನೆ ಮನೋನ್ಮಣಿ ಶ್ರೀ ಮರಕತವಲ್ಲಿ (ದೇವಿ)

ಚರಣ : ಚಂದ್ರಶೇಖರನ ರಾಣಿಯೆ ನಿನ್ನ
ಚರಣಕೆ ನಮಿಪೆ ಪಾಲಿಸಮ್ಮ
ಕಾವೇರಿ ಕಪಿಲಾ ಸ್ಫಟಿಕ ಸರೋವರ
ತೀರದಿ ಹೊಳೆವ ತ್ರಿಮಕುಟವಾಸಿನಿ (ದೇವಿ)

## ೩

ರಾಗ : ಕೇದಾರಗೌಳ ತಾಳ : ರೂಪಕ

ಪಲ್ಲವಿ : ಶೇಷಾಚಲವಾಸ ಶ್ರೀ ವೆಂಕಟೇಶ

ಅನುಪಲ್ಲವಿ : ಶೇಷಶಯನ ಶಂಖಭೂಷಣ
ವೆಂಕಟರಮಣ ಸಂಕಟಹರಣ (ಶೇಷಾಚಲ)

ಚರಣ : ಪರಮಪುರುಷ ಪರಂಧಾಮ
ಪದ್ಮಾವತೀರಮಣ
ಪುರಂದರನುತ ಪುರುಷೋತ್ತಮ
ತ್ರಿಮಕುಟ ಕ್ಷೇತ್ರವಾಸ ವಿನುತ (ಶೇಷಾಚಲ)

೪

ರಾಗ : ಬಿಲಹರಿ ತಾಳ : ಆದಿ

ಪಲ್ಲವಿ : ಪ್ರಸನ್ನ ಪಾರ್ವತಿ ಪ್ರಶಾಂತ ಮೂರುತಿ
ವಿಪನ್ನ ಜನರನು ರಕ್ಷಿಸು ತಾಯೆ

ಅನುಪಲ್ಲವಿ : ಮಾಧವ ಸೋದರಿ ಮಂಜುಳ ವಾಗ್ಝರಿ
ಮಂಗಳಾಂಗಿಯರು ನಿನ್ನ ಪೂಜಿಪರು

ಚರಣ : ನೀಲಕಂಠನ ಪಟ್ಟದ ರಾಣಿ
ನಿಗಮಾಗಮ ಸಂಚಾರಿಣಿ
ಗಾನಲೋಲೆ ಘನ ಶ್ಯಾಮಲವೇಣಿ
ಗರಳಪುರೀಶ್ವರಿ ತ್ರಿಮಕುಟವಾಸಿನಿ (ಪ್ರಸನ್ನ)

೫

ರಾಗ : ಬಹುಧಾರಿ ತಾಳ : ರೂಪಕ

ಪಲ್ಲವಿ : ಪ್ರಸನ್ನ ಗಣಪತೇ ಪಾಹಿ

ಅನುಪಲ್ಲವಿ : ಪಶುಪತೀ ಸುತ
ವಸುಗಣಪೂಜಿತ ವರಪ್ರದ (ಪ್ರಸನ್ನ)

ಚರಣ : ಪ್ರಣವರೂಪ ಕೃಷ್ಣ ಪಿಂಗಾಕ್ಷ
ವಕ್ರತುಂಡ ವಿನಾಯಕ
ಪುರಂದರಾದಿ ಸುರಸೇವಿತ
ತ್ರಿಮಕುಟಕ್ಷೇತ್ರ ಪರಿಪಾಲಿತ (ಪ್ರಸನ್ನ)

೬

ರಾಗ : ಶುಭಪಂತುವರಾಳಿ ತಾಳ : ರೂಪಕ

ಪಲ್ಲವಿ : ಶಂಭೋ ಶಿವಶಂಕರ ವಿಭೋ
ಚಂದ್ರಶೇಖರ ಪಾಹಿ ಪ್ರಭೋ (ಶಂಭೋ)

ಅನುಪಲ್ಲವಿ : ಉಮಾಪತಿ ಕುಮಾರ ಜನಕ
ಕುಂಭಸಂಭವ ಮುನಿ ಸ್ಥಾಪಿತ (ಶಂಭೋ)

ಚರಣ : ಗಂಗಾ ಗರ್ವಭಂಗ ಮಹಾ
ಲಿಂಗ ಶೃಂಗಿ ಭೃಂಗಿ ವಿನುತ
ತ್ರಿಪುರಮಥನ ತ್ರಿಲೋಚನ
ತ್ರಿಮಕುಟಕ್ಷೇತ್ರ ಪರಿಪಾಲನ (ಶಂಭೋ)

೭

ರಾಗ : ಸಾವೇರಿ     ತಾಳ : ಆದಿ

ಪಲ್ಲವಿ : ದೇವಿ ಶ್ರೀ ಚಾಮುಂಡೇಶ್ವರಿ
ಕೃಪಾಕರಿ ಶಂಕರಿ (ದೇವಿ)

ಅನುಪಲ್ಲವಿ : ಮಾರಜನಕ ಸಹೋದರಿ ಗೌರಿ
ಮಹಾಬಲಗಿರಿ ನಿವಾಸಿನಿ ಅಂಬ (ದೇವಿ)

ಚರಣ : ಮಹಿಷಾಸುರ ಮರ್ದಿನಿ ಅಂಬ
ಮಹಾಬಲೇಶ್ವರ ಮಹಿತೇ ದೇವಿ
ರಾಜರಾಜ ಜಯಚಾಮರಾಜೇಂದ್ರ
ಪೂಜಿತೆ ತ್ರಿಮಕುಟಕ್ಷೇತ್ರ ವಾಸನುತೆ (ದೇವಿ)

೮

ರಾಗ : ನಾಟಕುರಂಜಿ     ತಾಳ : ಆದಿ

ಪಲ್ಲವಿ : ದೇವದೇವ ಶ್ರೀ ದೇವಸೇನೇಶ
ದೀನಜನಾವನ ದಾನವ ಮರ್ದನ (ದೇವ)

ಅನುಪಲ್ಲವಿ : ನಾಗರೂಪಧರ ನಗಜೆ ಕುಮಾರ
ನಾರದ ವಂದಿತ ನಮಿಪೆ ಚರಣಕೆ (ದೇವ)

ಚರಣ : ಶ್ರೀ ಶರವಣಭವ ಮಂತ್ರ ಸದನ
ಶಂಕರನಂದನ ಷಡಾನನ
ಕಲಿಯುಗ ವರದ ಕರವೇಲಾಯುಧ
ತ್ರಿಮಕುಟವಾಸನುತ ತಿರುಚೆಂದೂರನೆ (ದೇವ)

೯

ರಾಗ : ಕಲ್ಯಾಣಿ     ತಾಳ : ಆದಿ (ತಿಶ್ರ ಗತಿ) ಅಥವಾ ಚತುರಶ್ರ ಏಕ (ತಿಶ್ರ ಗತಿ)

ಪಲ್ಲವಿ : ಕಾತ್ಯಾಯಿನಿ ಕಲ್ಯಾಣಿ
ಕಾವವೇ ಜಯಚಾಮರಾಜುನಿ (ಕಾತ್ಯಾ)

ಅನುಪಲ್ಲವಿ : ಕರಿವರದ ಸಹೋದರಿ ಅಂಬ
ಕರುಣಿಂಚುಟಕಿದೇ ಸಮಯಮು (ಕಾತ್ಯಾ)

ಚರಣ : ಕಾಮವೈರಿ ರಾಣಿ ನಾದು
ಕಷ್ಟಮು ತೊಲಗಿಂಪವಮ್ಮ ಪಾಲುಮಾಲಿಕೇಲನಮ್ಮ
ಪತಿತಪಾವನಿ ಅಂಬ
ತ್ರಿಮಕುಟೇಶ್ವರಿ ಅಂಬ ಪೂರ್ಣಮಂಗಳ ಕಾಮಾಕ್ಷಿ (ಕಾತ್ಯಾ)

೧೦

ರಾಗ : ಆಭೇರಿ ತಾಳ : ಆದಿ

ಪಲ್ಲವಿ : ನಂಜುಂಡೇಶ್ವರ ಮಾಂ ಪಾಹಿ ಶಂಕರ (ನಂಜುಂಡೇಶ್ವರ)

ಅನುಪಲ್ಲವಿ : ನಂದಿವಾಹನ ನಾಗಭೂಷಣ
ನಾರಾಯಣೀ ಮನಮೋಹನ (ನಂಜುಂಡೇಶ್ವರ)

ಚರಣ : ಓಂ ನಮಃಶಿವಾಯ ಮಂತ್ರಸದನ
ಜಯಚಾಮರಾಜ ವಂಶವರ್ಧನ
ಗರಳಪುರಿ ಕ್ಷೇತ್ರ ಪರಿಪಾಲನ
ತ್ರಿಮಕುಟವಾಸ ವಿನುತ ಚರಣ (ನಂಜುಂಡೇಶ್ವರ)

೧೧

ರಾಗ : ಸಾರಂಗ ತಾಳ : ಛಾಪು

5

ಪಲ್ಲವಿ : ಮಹಾಮಾಯೆ ಬಾ ತಾಯೆ ತಾಯೆ

ಅನುಪಲ್ಲವಿ : ಸ್ವರವರ್ಣ ಶ್ರುತಿವಿನುತೆ ರಸವಿಧಾತೆ
ಸ್ಮೃತಿ ಪೂರ್ಣ ಸಂಗೀತೆ
ಲೋಕಮಾತೆ ಸರಸ್ವತಿಯೆ (ಮಹಾಮಾಯೆ)

ಚರಣ : ಮನೋಭಾವ ಭಾವಪೂರ್ಣೆ
ಪೂರ್ಣಪುಣ್ಯ ಸ್ವರೂಪೆ ದೇವಿ
ಸರಸ ರಾಗ ರಸ ಸ್ವರೂಪೆ
ಶ್ರೀ ವಿಶಾರದೆ ಶಾರದಾಂಬೆ
ಜಯಚಾಮರಾಜೇಂದ್ರ
ಕುಲಮಾತೆ ವಿಜಯದಾತೆ
ತ್ರಿಮಕುಟ ನಿರ್ಮಾತೆ
ನಮಸ್ತೇ ನಮಸ್ತೇ (ಮಹಾಮಾಯೆ)

೧೨

ರಾಗ : ವಿಜಯನಾಗರಿ ತಾಳ : ಆದಿ

ಪಲ್ಲವಿ : ಲಲಿತಾಂಬಿಕೆ ಮಾಂ ಪಾಹಿ

ಅನುಪಲ್ಲವಿ : ಶಿವಸುಂದರಿ ಶ್ರಿತ ಶುಭಕರಿ
ತ್ರಿಲೋಕೈಕುಶಲಕರೀ ಗೌರಿ (ಲಲಿತಾಂ)

ಚರಣ : ಜಗದಾದಿ ಮಾಯೆ ಸದಯೆ
ನಿರಪಾಯೆ ವೇದಶೀರ್ಷ ಗೇಯೆ
ವಿಮಲಛಾಯೆ
ಮಹಿಮಾಕರೆ ಮಧುಪ ಚಿಕುರೆ
ಮುರಾರಿ ವಿನುತೆ ಸರಸಿಜ
ಮಧುಕರಿ ನರಹರಿ ಸೋದರಿ (ಲಲಿತಾಂ)

## ೧೩

ರಾಗ : ಖರಹರಪ್ರಿಯ ತಾಳ : ಆದಿ

ಪಲ್ಲವಿ : ನವನಂದಿನಿ ನಾರಾಯಣೀ

ಅನುಪಲ್ಲವಿ : ಜಯಚಾಮರಾಜ ಪ್ರಿಯ ಪೂಜಿನಿ
ಮಹಿಷೂರ ಶ್ರೀ ಸಂವರ್ಧಿನಿ (ನವ)

ಚರಣ : ಯದುರಾಜಯೋಗ ಸಂಜೀವಿನಿ
ಇದು ಸಮಯವಮ್ಮ ಗುಣಭೂಷಣಿ
ನವನವೋನ್ಮಣಿ ಮಾಂ ಪಾಹಿ ಜನನಿ
ತ್ರಿಮುಕುಟಪುರ ಶ್ರೀವಾಸಿನಿ (ನವ)

## ೧೪

ರಾಗ : ತೋಡಿ ತಾಳ : ಆದಿ

ಪಲ್ಲವಿ : ಪ್ರಸನ್ನ ಸೀತಾರಾಮಚಂದ್ರ
ಪಾಹಿ ಪಾಹಿ ಸದ್ಗುಣ ಸಾಂದ್ರ (ಪ್ರಸನ್ನ)

ಅನುಪಲ್ಲವಿ : ಗಾನವಿಶಾರದ ಕೃಷ್ಣ ಸ್ಥಾಪಿತ
ಮಹೀಷೂರಪುರ ಪರಿಪಾಲಿತ (ಪ್ರಸನ್ನ)

ಚರಣ : ದಶರಥನಂದನ ದಶಶಿರಖಂಡನ
ದಶದಿಕ್ಪಾಲನ ಧರ್ಮಸಂಸ್ಥಾಪನ
ಸೀತಾ,ಲಕ್ಷ್ಮಣ ಭರತ ರಿಪುಘ್ನ
ಮಾರುತಿ ಸೇವಿತ ತ್ರಿಮುಕುಟವಾಸನುತ (ಪ್ರಸನ್ನ)

೧೫

8 ✓ ರಾಗ : ಕುಂತಲವರಾಳಿ ತಾಳ : ಆದಿ

ಪಲ್ಲವಿ : ಶರವಣಭವ ಷಣ್ಮುಖನೆ ಸ್ವಾಮಿ
ಶರಣಾಗತ ರಕ್ಷಕನೆ ಸ್ವಾಮಿ (ಶರವಣ)

ಅನುಪಲ್ಲವಿ : ಪಳನಿವಾಸ ಸ್ವಪ್ರಕಾಶ
ಸುರಸೇವಿತ ಸುಬ್ರಹ್ಮಣ್ಯ (ಶರವಣ)

ಚರಣ : ವಳ್ಳಿ ದೈವಯಾನೆ ಮನೋವಲ್ಲಭ
ಮಾರಾರಿನುತ ಸುಕುಮಾರನೆ
ಓಂಕಾರ ಪ್ರಣವಾರ್ಥ ನಿರೂಪಣ
ತ್ರಿಮಕುಟವಾಸ ವಿನುತ ಚರಣ (ಶರವಣ)

೧೬

✓ ರಾಗ : ಕಾಂಭೋಜಿ ತಾಳ : ಆದಿ

9 ಪಲ್ಲವಿ : ಚಿದಂಬರ ಚೈತನ್ಯ ಓಂಕಾರ ಸ್ವರೂಪ

ಅನುಪಲ್ಲವಿ : ಕಲಾಧರ ಧೀರ ತಧೀಂ ನತೋಂ ತಧಿತೋಂನ ನಟನಗುರು
ನಾಟ್ಯ ರೂಪಾವತಾರ ಪರಮ (ಚಿದಂಬರ)

ಚರಣ : ಕಾಮಿತವೀವ ಕೃಪಾಳು
ದಯಾಕರ ಶ್ರೀ ಚಂದ್ರಶೇಖರ
ದಿಗಂಬರ ಧೀರಾ ಭಬಂ ಭಬಂ
ಭಜನಾದಿ ಡಮರುನುತ
ಮಾನ ಯೋಗಿ ಶ್ರೀ ತ್ರಿಮಕುಟವಾಸನುತ (ಚಿದಂಬರ)

೧೭

10 ✓ ರಾಗ : ಆನಂದಭೈರವಿ ತಾಳ : ಖಂಡಛಾಪು

ಪಲ್ಲವಿ : ಶ್ರೀರಾಮ ಜಯರಾಮ ಜಯ ಜಯ ರಾಮ ರಾಮ

ಅನುಪಲ್ಲವಿ : ಶೃಂಗಾರ ರಾಮ ತವ ಪಾದಭಕ್ತಿಂ ದೇಹಿ ದೇಹಿ (ಶ್ರೀರಾಮ)

ಚರಣ : ಅಮರೇಂದ್ರ ನುತನಾಮ ಅಂಬುಜಾಕ್ಷ ಶ್ರೀರಾಮ
ಅಂಗದಾಶ್ರಿತ ರಾಮ ಅಯೋಧ್ಯಾಧಿಪ ರಾಮ
ಮಾರುತಿ ಪ್ರಿಯ ರಾಮ ಮಾ ಮನೋಹರರಾಮ
ತ್ರಿಮಕುಟವಾಸನುತ ಪ್ರಸನ್ನ ಸೀತಾರಾಮ (ಶ್ರೀರಾಮ)

೧

ರಾಗ : ಉದಯರವಿಚಂದ್ರಿಕೆ  ತಾಳ : ಆದಿ

ಆರೋಹಣ : ಸ ಗ ಮ ಪ ನಿ ಸ
ಅವರೋಹಣ : ಸ ನಿ ಪ ಮ ಗ ಸ

೨೦ನೇ ನಠಭೈರವಿಯಲ್ಲಿ ಜನ್ಯ
ಸಾ.ಗಾಂಧಾರ, ಶು.ಮಧ್ಯಮ, ಕೈ.ನಿಷಾದ

ಪಲ್ಲವಿ

॥ , , , ನಿ ಪ ಮ ಗ ಸ । ನಿ ॰ ॰ ಸ । ಗ ಮ ಪ ನಿ ॥
ವ ರ ಗ ಣ ಪ ತೇ ಮಾಂ ಪಾ

೨ ॥ ಸಾ , । ನಿ ಸ ಗ ಸ ನಿ ॰ ಸ ಗ । ಮಾ ಗ ಮ ಪಾ ಮ ಪ ॥
ವ ರ ಗ ಣ ಪ ತೇ ಮಾಂ ಪಾ

೩ ॥ ನಿ ॰ ಪ ನಿ ಸಾ ಸ ನಿ ಪ ಮ ಗ ಸ । ನಿಸಗಸ ನೀಸಗ । ಮಗಮಗ ಮಪಮಪ ॥
ಹಿ ವ ರ ಗ ಣ ಪ ತೇ ಮಾಂ ಪಾ

॥ ಮ ಪ ನಿ ಪ ನಿ ಸ
ಹಿ (ವರಗಣಪತೇ)

ಅನುಪಲ್ಲವಿ

॥ , , , ಪ ಪ ಮಾ ಪ । ಮ ಗಾ ಮಾ , ಪಾ । ಪ ನಿ ಸಾ ; ಸ ನಿ ॥
ವ ರ ದಾ ತ ವ ಸು ಗ ಣ ಪೂ ಜಿ

೨ ॥ ಸಾ , ಸ ನಿ । ಪ ಮ ಗ ಮ ; ಪಾ । ॥
ತ ವ ರ ದಾ ತ ವ ಸು ಗ ಣ ಪೂ ಜಿ

೩ ॥ ಸ ನಿ ಪ ಮ ಪ ನಿ ಸ ನಿ ಪಾ ಮಾ ; ಪ ನಿ । । ಪ ನಿ ಸಾ ; ಸ ನಿ ॥
ತ ವ ರ ದಾ ತ ವ ಸು ಗ ಣ ಪೂ ಜಿ

॥ ಸಾ , ಗ ಗಾ ಸ ಗ ಮ ಗ । ಸಾ , ನಿ ॰ , ಪಾ । ನೀ ॰ ಸ ನಿ ಪಾ ಪ ಮ ॥
ತ ಕ ರು ಣಾ ನಿ ದಾ ನ ಗಾ ನ ಪ್ರಿ

॥ ಪ ನಿ ಸಾ ; । । ॥
ಯ ಕ ರು ಣಾ ನಿ ದಾ ನ ಗಾ ನ ಪ್ರಿ

೨ ॥ ಗ ಮ ಪ ನಿ ಸಾ । । ನೀ ಸ ನಿ ಪಾ ಮ ಗ ॥
ಯ ಕ ರು ಣಾ ನಿ ದಾ ನ ಗಾ ನ ಪ್ರಿ

೩ ॥ ಸ ಗ ಮ ಪ ನಿ ಸ
ಯ (ವರಗಣಪತೇ)

ಚರಣ

॥ , , , ಮ ಮಾ ಮ ಗ ಗ ಗ । ಮಾ , ಮ ; ಗಾ । ಮಾಗಮಪಾಪಮ ॥
ಜ ಗ ದಾ ದಿ ಪೂ ಜ್ಯ ಜ ಲ ಜಾ ಪ್ತ

॥ ಗ ಸ ಗ ಗ ಗಾ ಸ ಗ ಮಾ ಮ ಗ । ಸಾ , ನಿ ; ಧಾ । ನಿ ಸ ಗ ಮ ॥
ತೇ ಜ ವಿ ಷ್ಣು ನಾ ಥ ವಿ ಶ್ವ ವ ರ ಕೋ ವಿ

॥ ಪಾ , ಮಾ ನಿ ಪ ಮ ಗ ; ಸ ಗ । ಮಾ , ಮ ; ಮಾ । ಮಾಗಮಪನಿಪಮ ॥
ದ ಜ ಗ ದಾ ದಿ ಪೂ ಜ್ಯ ಜ ಲ ಜಾ ಪ್ತ

॥ ಗ ಸ ಗ ಗ ಗಾ ಸ ಗ ಮಾ ಮ ಗ । ಸಾ , ನಿ ; ಪ । ನಿ ಸ ಗ ಮ ॥
ತೇ ಜ ವಿ ಷ್ಣು ನಾ ಥ ವಿ ಶ್ವ ವ ರ ಕೋ ವಿ

॥ ಪಾ ,
ದ

ನೃಹರೀಶ ಬ್ರಹ್ಮಾರ್ಚಿತ ಮಾನಿತ
ನತ ಪಾರಿಜಾತ ನಗಜಾಸುತ ॥ (ಅನುಪಲ್ಲವಿಯಂತೆ)

* * *

## ೨

**ರಾಗ : ಧನ್ಯಾಸಿ　　ತಾಳ : ಆದಿ　　ಎಣಿಕೆ : ಒಂದು ಕಳೆ**

ಆ. ಸ ಗ ಮ ಪ ನಿ ಸ　　ಅನೇ ಮೇಳ, ಹನುಮತೋಡಿಯಲ್ಲಿ ಜನ್ಯ

ಅ. ಸ ನಿ ದ ಪ ಮ ಗ ರಿ ಸ　　ಶು.ರಿಷಭ, ಸಾ.ಗಾಂಧಾರ, ಶು.ಮಧ್ಯಮ, ಶು.ದೈವತ, ಕೈ.ನಿಶಾದ

### ಪಲ್ಲವಿ

॥ ಸಾ ಪಾ ಪ ಪ ಮ ಗ　ಮಾ　ಪ　ನಿ　। ಸ ರಿ ಸ ನಿ　ದ　ಪ　। ಮಾ ಪ ನೀ ಸ ರೀ ॥
ದೇ　ವೀ　　ಪೂ　　ರ್ಣ ಮಂ　ಗ　ಳ　ಕಾ　ಮಾ

॥ ಸಾ　;　;　ಪ　ನಿ　। ಸ ರಿ ನಿ ಸ　ಪ　ಪ　। ಮ ಗ ಪ ಮ ಗ ರಿ ಸಾ ॥
ಕ್ಷಿ　　ಕ　ರು　ಣಾ　　ಕ　ಟಾ　　ಕ್ಷಿ

೧ ॥ ಮ ಗ ಪ ಮ ದ ಪ ಮ ಗ　ಮಾ　ಪ　ನಿ　। ಸ ರಿ ಸ ನಿ　ದ　ಪ　। ಮಾ ಪ ನೀ ಸ ರೀ ॥
ದೇ　ವಿ　　ಪೂ　　ರ್ಣ ಮಂ　ಗ　ಳ　ಕಾ　ಮಾ

॥ ಸಾ　;　;　ಪ　ನಿ　। ಸ ರಿ ನಿ ಸ ಪ ನಿ ಮ ಪ । ಮ ಗ ಪ ಮ ಗ ರಿ ಸಾ ॥
ಕ್ಷಿ　　ಕ　ರು　ಣಾ　　ಕ　ಟಾ　　ಕ್ಷಿ

೨ ॥ ಗ ಮ ಪ ನಿ ಸಾರಿಸ ನಿ ದ ಪ ಮ ಗ ಮ ಪಾ , ನಿ । ಸಾ ಗ ರಿ ಸ ನಿ ದ ಪ　। ದ ಮ ಪಾ ಪ ನಿ ಸ ರಿ ॥
ದೇ　ವೀ　　ಪೂ　　ರ್ಣ ಮಂ　ಗ　ಳ　ಕಾ ಮಾ

॥ ನಿ ಸಾ ,　;　;　ಪ　ನಿ　। ಸ ರಿ ನಿ ಸ ಪ ನಿ ಮ ಪ । ಮ ಗ ಪ ಮ ಗ ರಿ ಸಾ ॥
ಕ್ಷಿ　　ಕ　ರು　ಣಾ　　ಕ　ಟಾ　　ಕ್ಷಿ

(ದೇವೀ)

### ಅನುಪಲ್ಲವಿ

॥ ಪ　ನಿ　॰　ಸ　ನಿ　ದ　ಪ　ಮ　। ಪ　ನಿ　ಸ　ಸ　। ರಿ　ನಿ　ಸಾ　॥
ಪ್ರ　ಸ　　ನ್ನ　ವ　ದ　ನೇ　　ಮಂ　ಜು　ಳ　　ರ　ದ　ನೆ

॥ ಪ　ನಿ　; ಸ ರಿ ಸ ನಿ ದ ಪ ನಿ ದ ಪ ಮ　। ಪ　ನಿ　ಸ　ಸ　। ಸ ಗ ರಿ ನಿ ಸಾ ;　॥
ಪ್ರ　ಸ　ನ್ನ　ವ　ದ　ನೆ　　ಮಂ　ಜು　ಳ　　ರ　ದ　ನೆ

೩

ರಾಗ : ಕೇದಾರಗೌಳ    ತಾಳ : ರೂಪಕ    ಎಣಿಕೆ : ಒಂದು ಕಳೆ

ಆರೋಹಣ : ಸ ರಿ ಮ ಪ ನಿ ಸ

ಅವರೋಹಣ : ಸ ನಿ ದ ಪ ಮ ಗ ರಿ ಸ

೨೮ನೇ ಮೇಳ, ಹರಿಕಾಂಭೋಜಿಯಲ್ಲಿ ಜನ್ಯ

ಚ.ರಿಷಭ, ಅಂ.ಗಾಂಧಾರ, ಶು.ಮಧ್ಯಮ, ಚ.ಧೈವತ, ಕೈ.ನಿಷಾದ

ಪಲ್ಲವಿ

೧ ‖ ಸಾ ; । ಸ ನಿ ನಿ ದ ಪ ಪ ‖ ಮ ಪ ನಿ ದ । ದ ಪ ಮ ಗ ರಿ ಗ ಸಾ ‖
ಶೇ ಷಾ ಚ ಲ ವಾ ಸ

‖ ರಿ ಮ । ಮಾ ಪ ನಿ ಸ ರಿ ‖ ಸಾ ; । ; ಸ ನಿ ದ ಮ ಪ ನಿ ‖
ಶ್ರೀ ವೆಂ ಕ ಟೇ ಶ

೨ ‖ ಸ ರಿ ಗ ರಿ । ಸ ಸ ನಿ ದ ಪ ಪ ‖ ಮ ಪ ದಾನಿದ । ಪಾದಪ ಮ ಗ ರಿ ಗ ಸಾ ‖
ಶೇ ಷಾ ಚ ಲ ವಾ ಸ

‖ ರಿ ಮ ರಿ ಮ । ಪ ನಿ ಮ ಪ ನಿ ಸ ರೀ ‖ ಮ ಗ ಗ ರಿ । ಸಾ ಸ ನಿ ದ ಮ ಪ ನಿ ‖
ಶ್ರೀ ವೆಂ ಕ ಟೇ ಶ

(ಶೇಷಾಚಲ)

ಅನುಪಲ್ಲವಿ

‖ ಪ ಮ ಪ ನಿ । ಸ ರಿ ರಿ ರಿ ‖ ರಿ ಗ ಮ ಗ । ರೀ ಮ ಗ ರಿ ಸ ಸಾ ‖
ಶೇ ಷ ಶ ಯ ನ ಶಂ ಖ ಭೂ ಷ ಣ

೧ ‖ , , , ಪ । ಮ ಪ ನಿ ಸ ರಿ ‖ ರಿ ಪ ಮ ಗ । ರೀ ಮ ಗ ರಿ ಸ ಸಾ ‖
ಶೇ ಷ ಶ ಯ ನ ಶಂ ಖ ಭೂ ಷ ಣ

‖ ನಿ ಸಾ ರಿ । ಸಾ ಸಾರಿಸ ನಿ ದ ಪಾ ‖ ಮ ಪಾ ದ । ಪಾ ಮ ಗ ರಿ ಮ ಪ ನಿ ‖
ವೆಂ ಕ ಟ ರ ಮ ಣ ಸಂ ಕ ಟ ಹ ರ ಣ

### ಚಿಟ್ಟೆಸ್ವರ

॥ ಸಾ ರಿ ಸ । ನಿ ದ ಪ ದ ಪಾ ಮ ಗ ॥ ರೀ ಮ ಗ । ರೀ , ಸ ರಿ ಮ ಪ ನಿ ॥

॥ ಸಾ ಸ ರಿ । ಮ ಗ ರೀ ಗ ರಿ ಸ ನಿ ॥ ಸ ರಿ ಮ ಗ । ರಿ ಸಾ ಸಾ , ನಿ ದ ಪ ॥

॥ ಮ ಪ ನಿ ದ । ಪ ಪಾ ಪಾ ಮ ಗ ರಿ ॥ ಸ ರಿ ಮ ಗ । ರಿ ಸಾ ರೀ ಮ ಪ ನಿ ॥

(ಶೇಷಾಚಲ)

### ಚರಣ

॥ ಪಾ ಮ ಗ । ರಿ ಗ ಸ ಸ ॥ ರಿ ಮ । ಽ ಪಾ ಪ ॥
ಪ ರ ಮ ಪು ರು ಷ ಪ ರಂ ಧಾ ಮ

॥ , ಪ ಮ । ಪ ಸ ನಿ ದ ಮ ಮ ॥ ಪ ನಿ । ಸಾ ಽ . ಽ ॥
ಪ ದ್ಮಾ ವ ತಿ ರ ಮ ಣ

॥ , ಮ ಪಾ । , ನಿ ಸಾ ರಿ ರಿ ॥ ರಿ ಪ ಮ ಗ । ರೀ ಗ ರಿ ಸ ಸ ॥
ಪು ರಂ ದ ರ ನು ತ ಪು ರು ಷೋ ತ್ತ ಮ

॥ ನಿ ಸಾ ರಿ । ಸಾ ನಿ ಸ ನಿ ದ ಪಾ ॥ ದ ಪ ಮ ಗ । ರೀ ರಿ ಮ ಪ ನಿ ಸ ರಿ ॥
ತ್ರಿ ಮ ಕು ಟ ಕ್ಷೇ ತ್ರ ವಾ ಸ ವಿ ನು ತ

(ಶೇಷಾಚಲ)

* * *

೪

ರಾಗ : ಬಿಲಹರಿ ತಾಳ : ಆದಿ ಎಣಿಕೆ : ಒಂದು ಕಳೆ

ಆರೋಹಣ : ಸ ರಿ ಗ ಪ ದ ಸ

೨೯ನೇ ಮೇಳ ಶಂಕರಾಭರಣದಲ್ಲಿ ಜನ್ಯ

ಅವರೋಹಣ : ಸ ನಿ ದ ಪ ಮ ಗ ರಿ ಸ

ಚ.ರಿಷಭ. ಅಂ.ಗಾಂಧಾರ, ಶು.ಮಧ್ಯಮ, ಚ.ಧೈವತ, ಕಾ.ನಿಷಾದ

## ಪಲ್ಲವಿ

॥ ಸ ನಿ ದಾ ಪ ಪ ನಿ ದ ದ ಪ ಮ ಗ ರೀ । ಸ ಸ ರಿ ಗ । ಪಾ ಪ ಪ ॥
ಪ್ರ ಸ ನ್ನ ಪಾ ರ್ವ ತಿ ಪ್ರ ಶಾಂ ತ ಮೂ ರು ತಿ

॥ , , , ಗ ಪಾ ದಾ ಸಾ ಸ ನಿ ದ ಪ ದಾ । ; ದ ಗಾ ರಿ ಸಾ । ಸ ನಿ ದ ಪ ಮ ಗ ಪ ದ ॥
ವಿ ಪ ನ್ನ ಜ ನ ರ ಸು ರ ಕ್ಷಿ ಸೌ ತಾ ಯೆ

೧ ॥ ಸ ರಿ ಗ ಸ ನಿ ದ ಪಾ ಪಾ ದ ನಿ ದ ಪ ಮ ಗ ರೀ । ಸ ಸ ರಿ ಗ । ಪಾ ಪ ಪ ॥
ಪ್ರ ಸ ನ್ನ ಪಾ ರ್ವ ತಿ ಪ್ರ ಶಾಂ ತ ಮೂ ರು ತಿ

॥ , , , ಗ ಪಾ ದಾ ಸಾ ಸ ನಿ ದ ಪ ದಾ । ಗ ರಿ ಸ ನಿ ದ ರಿ ಸ ನಿ । ದ ಗ ಮ ಗ ರಿ ಗ ಪ ದ ॥
ವಿ ದ ನ್ನ ಜ ನ ರಿ ಸು ರ ಕ್ಷಿ ಸೌ ತಾ ಯೆ

## ಅನುಪಲ್ಲವಿ

॥ ; ಗಾ , ಪ ದಾ ಸಾ ಸ ಸ । ; ದ ಗಾ ರಿ ಸಾ । ನಿ ರಿ ಸ ನಿ ದ ಪ ದಾ ॥
ಮಾ ಧ ವ ಸೋ ದ ರಿ ಮಂ ಜುಳ ವಾ ಗ್ಝು ರಿ

॥ । ಸ ರಿ ಗಾ ಮ ಗ ರಿ ಸ ಸಾ । ॥
ಮಾ ಧ ವ ಸೋ ದ ರಿ ಮ ಜು ಳ ವಾ ಗ್ಝು ರಿ

॥ ; ದ ಗಾ ರಿ ಸಾ ಸಾ ಸ ನಿ ದ ಪ ದಾ । ದ ಪ ದ ರಿ ಸ ನಿ ದ ಪ । ದ ಪ ಮ ಗ ರಿ ಗ ಪ ದ ॥
ಮಂ ಗ ಳಾಂ ಗಿ ಯ ರು ಪೂ ಜಿ ಪ ರು ನಿ ನ್ನ

## ಚಿಟ್ಟೆ ಸ್ವರ

॥ ಪಾ , ದ ಪ ಮ ಗ ಪ ಮ ಗ ರಿ ಸ ನಿ̣ ಧ̣ ಪ̣ ಧ̣ । ಸಾ , ಸ ರಿ ಗ ಸಾ । ರಿ ಗ ಪ ಮ ಗ ರೀ ಗ ॥

॥ ಪ ದ ಪ ಮ ಗ ರಿ ಗ ಪ ದ ಸ̇ ರಿ̇ ಗ ಸಾ̇ , ಪ । ದ ಸ̇ ಪಾ , ಸ ರಿ ಗ । ಸಾ , ರೀ ಗ ಪ ದ ॥

## ಚರಣ

॥ ; ಪಾ , ಪ ಪಾ , ಪ ಪಾ । ; ಪ ದ ಸ̇ ನಿ ದ ಪ । ಪಾದಪ ಮ ಗ ರೀ ರೀ ॥
ನೀ ಲ ಕಂ ಠ ನ ಪ ಟ್ಟ ದ ರಾ ಣೀ

॥ ; ಗ ಪಾ ಮ ಗಾ ರಿ ಮ ಗ ರಿ ಸ ನಿ̣ ಧಾ̣ । ; ಸ ರೀ ಗ ರಿ ಗ । ಪಾ ಪ ಪ ॥
ನಿ ಗ ಮಾ ಗ ಮ ಸಂ ಚಾ ರಿ ಣಿ

ಗಾನಲೋಲೆ ಘನಶ್ಯಾಮಲ ವೇಣಿ
ಗರಳಪುರೀಶ್ವರಿ ತ್ರಿಮಕುಟವಾಸ ನುತೆ (ಅನುಪಲ್ಲವಿಯಂತೆ)

* * *

೫

ರಾಗ : ಬಹುದಾರಿ    ತಾಳ : ರೂಪಕ    ಎಣಿಕೆ : ಒಂದು ಕಳೆ

ಆರೋಹಣ : ಸ ಗ ಮ ಪ ದ ನಿ ಸ
ಅವರೋಹಣ : ಸ ನಿ ಪ ಮ ಗ ಸ

೨೮ನೇ ಮೇಳ ಹರಿಕಾಂಭೋಜಿಯಲ್ಲಿ ಜನ್ಯ
ಅಂ.ಗಾಂಧಾರ, ಶು.ಮಧ್ಯಮ, ಚ.ದೈವತ, ಕೈ.ನಿಷಾದ

### ಪಲ್ಲವಿ

॥ ಪಾ , ಮ । , ಗ ಸಾ ಗಾ ಮಾ ॥ ಗಾ ; । ; ಸಾ ಗಾ ಮಾ ॥
ಪ್ರ ಸ ನ್ನ ಗ ಣ ಪ ತೇ ಪಾ ಹಿ

೨ ॥ ॥ ಗಾ ; । ; ಪ ಮ ಗ ಸ ಗ ಮ ॥
ಪ್ರ ಸ ನ್ನ ಗ ಣ ಪ ತೇ ಮಾಂ ಪಾ ಹಿ

೩ ॥ ॥ ಗ ಮ ಪ ದ । ನಿ ಸ ಸ ನಿ ಪ ಮ ಗ ಮ ॥
ಪ್ರ ಸ ನ್ನ ಗ ಣ ಪ ತೇ ಮಾಂ ಪಾ ಹಿ (ಪ್ರಸನ್ನ)

### ಅನುಪಲ್ಲವಿ

೧ ॥ ಸ ಸ । ನಿ ಪ ದ ನಿ ಸಾ ನೀ ॥ ಸಾ ; । ; ; ಮ ಪ ದ ನಿ ॥
ಪ ಶು ಪ ತೀ ಸು ತ

೨ ॥ ॥ ಸಾ ಗಾ । ಸ ಗ ಮ ಗ ಸಾ ; ॥
ಪ ಶು ಪ ತೀ ಸು ತ

॥ ಸ ಗ । ಸ ಗ ಮ ಗ ಸಾ ; ॥ ಸ ನಿ ಪ ಮ । ಪ ಮ ಗ ಸ ನಿ ಸ ಗ ಮ ॥
ವ ಸು ಗ ಣ ಪೂ ಜಿ ತ ವ ರ ಪ್ರ ದ (ಪ್ರಸನ್ನ)

### ಚರಣ

॥ ಪ ಪ । ಪಾ ಪ ಮ ಮ ಗ ॥ ಸ ಗ । ಪ ಮ ಮ ಗ ಗ ಸ ॥
ಪ್ರ ಣ ವ ರೂ ಪ ಕೃ ಷ್ಣ ಪಿಂ ಗಾ ಕ್ಷ

॥ ಸ ಗ । ಸ ಗ ಮ ಗ ಸಾ ; ॥ ಸ ಗ । , ಮ ಪಾ ॥
ವ ಕ್ರ ತುಂ ಡ ವಿ ನಾ ಯ ಕ

॥ ಪ ಪ । ಪ ನಿ ಸ ನಿ ಪ ಮ ಗಾ ॥ ಗ ಗ । ಗ ಪ ಮಾ ಗ ಸ ॥
ಪ್ರ ಣ ವ ಸ್ವ ರೂ ಪ ಕೃ ಷ್ಣ ಪಿಂ ಗಾ ಕ್ಷ

॥ ಸ ಗ । ಸ ಗ ಮ ಗ ಸಾ ; ॥ ಸ ಗ । , ಮ ಪಾ ॥
ವ ಕ್ರ ತುಂ ಡ ವಿ ನಾ ಯ ಕ

ಪುರಂದರಾದಿ ಸುರಸೇವಿತ
ತ್ರಿಮಕುಟಕ್ಷೇತ್ರ ಪರಿಪಾಲಿತ (ಅನುಪಲ್ಲವಿಯಂತೆ)

* * *

ಸಾ , ಪ ನಿ ಪ ಮ , ಗ ಮ ಗಾ , ನಿ - ಪ ಮ , ಗ ಸ ಗಾ , ಪ ಮ ಗ ಸ ನಿ ,
ಸಾ , ಸ ಗ ಮ , ಪ ಮ , ಗ ಮ , ಪ ದ - ನಿ ಸ ನಿ ಪ ಮ ಗ ಸ ನಿ ಸಾ ,
ಪ ದ ಪ ದ ನಿ ಸ ನಿ ಪ ಮಾ , । ಸ ಗ ಸ ಗ ಮ ಗ ಸ ನಿ ಸಾ ಗ ಮ ॥

## ೬

ರಾಗ : ಶುಭಪಂತುವರಾಳಿ    ತಾಳ : ರೂಪಕ    ಎಣಿಕೆ : ಒಂದು ಕಳೆ

ಆರೋಹಣ : ಸ ರಿ ಗ ಮ ಪ ದ ನಿ ಸ    ೪೫ನೇ ಮೇಳ ರಾಗ

ಅವರೋಹಣ : ಸ ನಿ ದ ಪ ಮ ಗ ರಿ ಸ    ಶು.ರಿಷಭ, ಸಾ.ಗಾಂಧಾರ, ಪ್ರ.ಮಧ್ಯಮ, ಶು.ದೈವತ, ಕಾ.ನಿಷಾದ.

### ಪಲ್ಲವಿ

॥ ಪಾ ; । ಪ ಮ ಗಾ ರಿ ಸ ॥ ಸ ರಿ ಗಾ । ರಿ ರಿ ಸಾ ಸಾ ॥
ಶಂ ಭೋ ಶಿ ವ ಶಂ ಕ ರ ವಿ ಭೋ

॥ ಸ ರಿ ಗಾ । ರೀ ಗ ಪಾ ಮ ಪಾ ॥ ಪಾ ; । ಪ ಮ ಪ ಮ ಗ ರಿ ಗ ಮ ॥
ಚಂ ದ್ರ ಶೇ ಖ ರ ಪಾ ಹಿ ಪ್ರ ಭೋ

೨ ॥ ಪಾ , ದ । ಪ ಮ ಗಾ , ರಿ ಸಾ ॥ ಸ ರಿ ಗಾ । ರಿ ರಿ ಸಾ ಸಾ ॥
ಶಂ ಭೋ ಶಿ ವ ಶಂ ಕ ರ ವಿ ಭೋ

॥ ಸ ರಿ ಗಾ । ರಿ ೯ ಗ ಪಾ ಮ ಪಾ ॥ ಪಾ ; । ಪ ಮ ಪ ಮ ಗ ರಿ ಗ ಮ ॥
ಚಂ ದ್ರ ಶೇ ಖ ರ ಪಾ ಹಿ ಪ್ರ ಭೋ

೩ ॥ ದನಿ ಸಾರಿಸ । ನಿ ದ ಪ ಮ ಗ ರಿ ಸಾ ॥ ಸ ರಿ ಗಾ । ರಿ ರಿ ಸಾ ಸಾ ॥
ಶಂ ಭೋ ಶಿ ವ ಶಂ ಕ ರ ವಿ ಭೋ

॥ ನಿ ಸ ಗ ರಿ । ಗಾ ಮ ಪ ದ ಪ ದಾ ॥ ಪ ಮ ನಿ ದ । ಪಾ ಪ ಮ ಗ ರಿ ಗ ಮ ॥
ಚಂ ದ್ರ ಶೇ ಖ ರ ಪಾ ಹಿ ಪ್ರ ಭೋ (ಶಂಭೋ)

### ಅನುಪಲ್ಲವಿ

॥ ದ ನಿ ಸ ರಿ । ನೀ ದ ಪ ಮಾ ದ ನಿ ॥ ಸಾ । ನಿ ಸ ರಿ ಸ ॥
ಉ ಮಾ ಪ ತಿ ಕು ಮಾ ರ ಜ ನ ಕ

॥ ಗ ರಿ ಗಾ । ಮಾ ಪ ಮ ಗ ರಿ ಸಾ ॥ ಸ ರಿ ಸ ನಿ । ದ ಪಾ ಮ ಗ ರಿ ಗ ಮ ॥
ಕುಂ ಭ ಸಂ ಭ ವ ಮು ನಿ ಸ್ಥಾ ಪಿ ತ (ಶಂಭೋ)

ಚರಣ

॥ ಗಾ ; । ಗಾ ; ಗಾ ಪ ಮ ॥ ಪ ಮ ಗಾ । ರಿ ರಿ ಸಾ ॥
ಗಂ ಗಾ ಗ ರ್ವ ಭಂ ಗ ಮ ಹಾ

॥ ಸ ರಿ ಗಾ । ರಿ ಗಾ ಮ ॥ ಗಾ ; । ಮಾ ಪ ಮ ಗ ರಿ ಗ ಮ ॥
ಲಿಂ ಗ ಶೃಂ ಗಿ ಭೃಂ ಗಿ ವಿ ನು ತ

॥ ; ಸ ಸ । , ನಿ ದ ನಿ ದ ಪ ಮಾ ॥ ದ ನಿ ಸಾ । , ನಿ ಗ ರಿ ಸಾ ; ॥
ತ್ರಿ ಪು ರ ಮ ದ ನ ತ್ರಿ ಲೋ ಚ ನ

॥ ಗಾ ಗಾ । ಪ ಮ ಗ ರಿ ಸಾ , ಸ ॥ ನಿ ಸ ರಿ ಸ । ನಿ ದ ಪ ಮ ಗ ರಿ ಗ ಮ ॥
ತ್ರಿ ಮ ಕು ಟ ಕ್ಷೇ ತ್ರ ಪ ರಿ ಪಾ ಲ ನ (ಶಂಭೋ)

* * *

## ೭

ರಾಗ : ಸಾವೇರಿ    ತಾಳ : ಆದಿ    ಎಣಿಕೆ : ಒಂದು ಕಳೆ

ಆರೋಹಣ : ಸ ರಿ ಮ ಪ ದ ಸ̇    ೧೫ನೇ ಮೇಳ ಮಾಯಾಮಾಳವಗೌಳದಲ್ಲಿ ಜನ್ಯ

ಅವರೋಹಣ : ಸ̇ ನಿ ದ ಪ ಮ ಗ ರಿ ಸ    ಶು.ರಿಷಭ, ಅಂ.ಗಾಂಧಾರ, ಶು.ಮಧ್ಯಮ, ಶು.ಧೈವತ, ಕಾ.ನಿಷಾದ

### ಪಲ್ಲವಿ

॥ ಸಾ ; , ರಿ̇ ಸ̇ ನಿ ದಾ ; ಪಾ ; । ; ಪ ದ ನಿ ದ ಪ ಮ । ಗಾ , ರಿ ॥
ದೇ ವಿ ಶ್ರೀ ಚಾ ಮುಂ ಡೇ ಶ್ವ

॥ ಸಾ ; ; ; ; ; ; ಸಾ । ರೀ ; ಪ ಮ ಮಾ । ಪಾ ದ ಮ ಪಾ ದಾ ॥
ರೀ ಕೃ ಪಾ ಕ ರಿ ಶಂ ಕ ರಿ

೨ ॥ ಸಾ ; , ರಿ̇ ಸ̇ ನಿ ದಾ ; ಪ ದ ರಿ̇ ಸ̇ । ನಿ ದ ಪ ದ ನಿ ದ ಪ ಮ । ಗಾ ; ; ರೀ ॥
ದೇ ವೀ ಶ್ರೀ ಚಾ ಮುಂ ಡೇ ಶ್ವ

॥ ಸಾ ; ; ; ; ; ; ರೀ̇ । ನೀ ದಾ ಪಾ ದಾ । ಪ ದ ನಿ ದ ಪ ಮ ಪ ದ ॥
ರೀ ಕೃ ಪಾ ಕ ರಿ ಶಂ ಕ ರಿ

೩ ॥ ಸಾ ರಿ̇ ಗ ರಿ̇ ಸ̇ ಸ̇ ನಿ ದಾ ; ದ ಪ ದ ಮ । ಪ ದ ರಿ̇ ಸ̇ ನಿ ದ ಪ ಮ । ಗಾ ; ; ರೀ ॥
ದೇ ವೀ ಶ್ರೀ ಚಾ ಮುಂ ಡೇ ಶ್ವ

॥ ಸಾ ; ; ; ; ; ; ರೀ̇ । ಸ̇ ನಿ ದಾ ಪಾ ಮಾ । ಪ ದ ನಿ ದ ಪ ಮ ಪ ದ ॥
ರೀ ಕೃ ಪಾ ಕ ರಿ ಶಂ ಕ ರಿ

### ಅನುಪಲ್ಲವಿ

॥ ಪ ದ ಮಾ ಮ ಪ ಪ ದ ; ದ ರಿ̇ । ಸ̇ ನಿ ದಾ ಪಾ ದಾ । ಸಾ̇ ; ; ಸಾ̇ ॥
ಮಾ ರ ಜ ನ ಕ ಸ ಹೋ ದ ರಿ ಗೌ ರಿ

೨ ॥ ಪ ದ ನಿ ದ ಪ ಮ ದಾ ಪಾ ದಾ ; ದ ರಿ̇ । ॥
ಮಾ ರ ಜ ನ ಕ ಸ ಹೋ ದ ರಿ ಗೌ ರಿ

೩ ॥ ಪ ದ ರಿ ಸ ನಿ ದ ಪ ಮ ದ ಪ ದಾ ; ಸ ರಿ । ಸ ನಿ ದಾ ನಿ ದ ಪ ದ । ಸಾ , ಸ ॥
ಮಾ ರ ಜ ನ ಕ ಸ ಹೋ ದ ರಿ ಗೌ ರಿ

॥ ಸಾ ರಿ ಗ ರಿ ಸ ಸ ರಿ ಸ ನಿ ದಾ ಪ ದ । ಪ ದ ರಿ ಸ ನಿ ದ । ಪಾ ದ ಮ ಪ ದ ॥
ಮ ಹಾ ಬ ಲ ಗಿ ರಿ ನಿ ವಾ ಸಿ ನಿ ಅಂ ಬ (ದೇವಿ)

ಚರಣ

॥ ಪ ದ ಪಾ ; ಪ ಪ ॥ ಮ ಪ ದಾ ದ ಪ ಮಾ । ಗ ರಿ ಸ ಸ ॥
ಮ ಹಿ ಷಾ ಸು ರ ಮ ರ್ದಿ ನಿ ಅಂ ಬ

॥ ಸ ರಿ ಗಾ ರಿ ಸ ಸ ನಿ ಧಾ ರಿ ಸ ರಿ ! ; ಸ ರಿ ! ಮಾ । ಪ ದ ಪ ದ ಮ ಪಾ , ॥
ಮ ಹಾ ಬ ಲೇ ಶ್ವ ರ ಮ ಹಿ ತೇ ದೇ ವೀ

॥ ದ ಮ ಮ ಪಾ ದ ಪ ದ । ರಿ ಸ ನಿ ದ ಪ ಮ ಪಾ । ದ ಸಾ ಸ ॥
ರಾ ಜ ರಾ ಜ ಜ ಯ ಚಾ ಮ ರಾ ಜೇಂ ದ್ರ

॥ ಸ ರಿ ಗಾ ರಿ ಸ ಸ ನಿ ದಾ ಪ ದ । ರಿ ಸ ನಿ ದ ಪ ಪ । ದ ಮ ದ ಪ ದಾ ॥
ಪೂ ಜಿ ತೆ ತ್ರಿ ಮ ಕು ಟ ಕ್ಷೇ ತ್ರ ವಾ ಸ ನು ತೆ (ದೇವಿ)

* * *

೮

ರಾಗ : ನಾಟಕುರಂಜಿ     ತಾಳ : ಆದಿ     ಎಣಿಕೆ : ಒಂದು ಕಳೆ

ಆರೋಹಣ : ಸ ರಿ ಗ ಮ ನಿ ದ ನಿ ಪ ದ ನಿ ಸ
ಅವರೋಹಣ : ಸ ನಿ ದ ಮ ಗ ಮ ಪ ಗ ರಿ ಸ

೨೮ನೇ ಮೇಳ ಹರಿಕಾಂಭೋಜಿಯಲ್ಲಿ ಜನ್ಯ
ಚ.ರಿಷಭ, ಅಂ.ಗಾಂಧಾರ, ಶು.ಮಧ್ಯಮ, ಚ.ದೈವತ, ಕೈ.ನಿಷಾದ

ಪಲ್ಲವಿ

॥ ಗಾ , ಪ ಮ ಗ ಸಾ ; ಸಾ ಸಾ ; । ದ ನಿ ಸ ನಿ ದ ನಿ ಫಾ । ದ ನಿ ಸಾ ರೀ ಗಾ ॥
ದೇ ವ ದೇ ವ ಶ್ರೀ ದೇ ವ ಸೇ ನೇ ಶ

೨ ॥ ಮ ಗ ನಿ ದ ಮ ಗ ಮ ಗ ಮ ಪ ಮ ಗ ಸಾ ; । ॥
ದೇ ವ ದೇ ವ ಶ್ರೀ ದೇ ವ ಸೇ ನೇ ಶ

೩ ॥ ಗ ಮ ದ ನಿ ಸಾ ಸ ನಿ ನಿ ದ ಮ ಗ ಸಾ ; । ॥
ದೇ ವ ದೇ ವ ಶ್ರೀ ದೇ ವ ಸೇ ನೇ ಶ

॥ ಮಾ ; ಮ ಗ ಮಾ ನಿ ದ ನಿ ಪ ದ ನಿ । ಸ ನಿ ರಿ ಸ ನಿ ದ ಮಾ । ಮ ಗ ಸಾ ಸಾ ರಿ ಗ ॥
ದೀ ನ ಜ ನಾ ವ ನ ದಾ ನ ವ ಮ ರ್ದ ನ (ದೇವ)

ಅನುಪಲ್ಲವಿ

॥ ದ ನಿ ಸಾ ಸಾ ದ ನಿ ಸ ದ ನಿ ಪ ದ ನಿ ಸಾ । ಸ ಸ ರಿ ಗ । ಮಾ ಮ ಗ ಸ ಸ ॥
ನಾ ಗ ರೂ ಪ ಧ ರ ನ ಗ ಜ ಕು ಮಾ ರ

॥ ಸ ನಿ ರಿ ಸ ಸಾ ಸ ನಿ ದ ನಿ ಪ ದ । ದ ನಿ ರಿ ಸ ನಿ ದ ಮಾ । ಮ ಗ ಸಾ , ಸ ರಿ ಗ ॥
ನಾ ರ ದಾ ದಿ ಮು ನಿ ವಂ ದಿ ತ ಚ ರ ಣ (ದೇವ)

ಚರಣ

॥ ಮಾ ; ಮ ಮ ಮ ಮ ಮ ಮ । ಮ ಮ ದ ನಿ । ನಿ ದ ಮಾ ॥
ಶ್ರೀ ಶ ರ ವ ಣ ಭ ವ ಮಂ ತ್ರ ಸ ದ ನಾ

॥ ಗ ರಿ ಗಾ ಮ ಪ ಮ ಗ ಸಾ ಸ ಸ । ಸ ರಿ ಗ ಮ । ದಾ ಸ ನಿ ನಿ ದ ಮಾ ॥
ಶಂ ಕ ರ ನಂ ದ ನ ಷ ಡಾ ನ ನ

ಕಲಿಯುಗವರದ ಕರವೇಲಾಯುಧ
ತ್ರಿಮುಕುಟವಾಸನುತ ತಿರುಚೆಂದೂರನೆ (ಅನುಪಲ್ಲವಿಯಂತೆ) (ದೇವ)

೯

ರಾಗ : ಕಲ್ಯಾಣಿ ತಾಳ : ಚ. ಏಕ ತಿಶ್ರಗತಿ ಎಣಿಕೆ : ಒಂದು ಕಳೆ

ಆರೋಹಣ : ಸ ರಿ ಗ ಮ ಪ ದ ನಿ ಸ
ಅವರೋಹಣ : ಸ ನಿ ದ ಪ ಮ ಗ ರಿ ಸ

೬೫ನೇ ಮೇಳ ರಾಗ
ಚ.ರಿಷಭ, ಅಂ.ಗಾಂಧಾರ, ಪ್ರ.ಮಧ್ಯಮ, ಚ.ಧೈವತ, ಕಾ.ನಿಷಾದ.

ಪಲ್ಲವಿ

೧ ॥ ಗಾ , ಮ ಪಾ ಗಾ , ರಿ ಸಾ ಗ ರಿ ಸ ನಿ ಸಾ ರಿ ೯ ; ರಿ ೯ ॥
ಕಾ ತ್ಯಾ ಯಿ ನಿ ಕ ಲ್ಯಾ ಣಿ

॥ ಗ ಮ ಗ ಗ ಪ ಮ ಗಾ ೯ ರಿ ಸಾ ಗ ರಿ ಸ ನಿ ಸಾ ರಿ ೯ ; ರಿ ೯ ॥
ಕಾ ತ್ಯಾ ಯಿನಿ ಕ ಲ್ಯಾ ಣಿ

೨ ॥ ಗ ಮ ಪ ದ ಪ ಮ ಗಾ , ರಿ ಸಾ ॥
ಕಾ ತ್ಯಾ ಯಿನಿ ಕ ಲ್ಯಾ ಣೀ

॥ ಸ ರಿ ಗ ರಿ ಸ ನಿ ಸಾ ರಿ ೯ ; ರಿ ೯ ॥
ಕಾ ತ್ಯಾ ಯಿನಿ ಕ ಲ್ಯಾ ಣಿ

೩ ॥ ಗ ಮ ಪ ದ ನಿ ದ ಪ ಮ ಗಾ ರಿ ಸಾ , ॥
ಕಾ ತ್ಯಾ ಯಿನಿ ಕ ಲ್ಯಾ ಣಿ

॥ ಗಾ ಸಾ , ನಿ ದ ಪ ಮ ಗ ರಿ ೯ ಸಾ ॥
ಕಾ ತ್ಯಾ ಯಿ ನಿ ಕ ಲ್ಯಾ ಣಿ

॥ ಗಾ ; ನಿ ೯ ದ ಪ ಪಾ ಪಾ ಪಾ ಪಾ ; ಪಾ ಪ ಮ ಗ ರಿ ನಿ ರಿ ॥
ಕಾ ವ ವೇ ಜ ಯ ಚಾ ಮ ರಾ ಜು ನಿ (ಕಾತ್ಯಾಯಿನಿ)

ಅನುಪಲ್ಲವಿ

॥ ಸಾ ಸಾ ಸಾ ಸ ನಿ ದಾ ಪಾ ದಾ ; ನಿ ೯ ಸಾ ; ; ॥
ಕ ರಿ ವ ರ ದ ಸ ಹೋ ದ ರೀ

॥ ಸ ನಿ ದ ಪ ದ ನಿ ॥
ಕ ರಿ ವ ರ ದ ಸ ಹೋ ದ ರಿ ಅಂ ಬ

೧೦

ರಾಗ : ಆಭೇರಿ ತಾಳ : ಆದಿ

೨೨ನೇ ಮೇಳ ಖರಹರಪ್ರಿಯದಲ್ಲಿ ಜನ್ಯ

ಆರೋಹಣ : ಸ ಗ ಮ ಪ ನಿ ಸ

ಅವರೋಹಣ : ಸ ನಿ ದ ಪ ಮ ಗ ರಿ ಸ

ಚ.ರಿಷಭ, ಸಾ.ಗಾಂಧಾರ, ಶು.ಮಧ್ಯಮ, ಚ.ದೈವತ, ಕೈ.ನಿಷಾದ

ಪಲ್ಲವಿ

॥ , , , ಸ ಸ ಗ ಮ ಪಾ ಮಾ । ಪಾ , ಪ । , ಪಾ , ಮ ಪ ಮ ॥
ನಂ ಜುಂ ಡೇ ಶ್ವ ರ ಮಾಂ ಪಾ ಹಿ ಶಂ

॥ ಪ ಮ ಗ ರಿ ಸ ನಿ ಸಾ ಪ ಮ ಗ ಮ ಪಾ ಮಾ । ಪಾ , ಗ ಮ । ಪ ನಿ ಸಾ , ಸ ನಿ ದ ॥
ಕ ರ ನಂ ಜುಂ ಡೇ ಶ್ವ ರ ಮಾಂ ಪಾ ಹಿ ಶಂ

॥ ಪ ಮ ಗ ರಿ ಸ ನಿ
ಕ ರ (ನಂಜುಂಡೇಶ್ವರ)

ಅನುಪಲ್ಲವಿ

॥ , , , ನಿ ನಿ ನಿ ೯ ದ ಪ । ನಿ ದ ಪ ಮ ಮಾ ಪಾ । ನೀ ಪ ನಿ ಸಾ ನೀ ॥
ನಂ ದಿ ವಾ ಹ ನ ನಾ ಗ ಭೂ ಷ

॥ ಸಾ , ನಿ ನಿ ನಿ ೯ ಸ ನಿ । ದ ಪ ನಿ ದ ಪ ಮ ಪಾ । ॥
ಣ ನಂ ದಿ ವಾ ಹ ನ ನಾ ಗ ಭೂ ಷ

॥ ಸಾ , ನಿ ಸ ಮ ಗ ಗ ರಿ ಸಾ ಸ ರಿ । ಸ ನಿ ನೀ ; ಪ ನಿ । ಪ ನಿ ಸಾ ; ನಿ ದ ॥
ಣ ನಾ ರಾ ಯ ಣಿ ಮ ನ ಮೋ ಹ

॥ ಪ ಮ ಗ ರಿ ಸ ನಿ
ನ (ನಂಜುಂಡೇಶ್ವರ)

ಚರಣ

॥ , , , ಪಾ ಪ ಪ ನಿ ದ । ಪ ಮ ಮಾ ಗ ಗ । ರಿ ನಿ ಸ ಮ ಗ ರಿ ॥
ನ ಮ ಶ್ಶಿ ವಾ ಯ ನುಂ ತ್ರ ಸ ದ

ಸಾ ,, ನಿ ಸ ಗ ಸ ಗ । ಮಾ , ಮಾ , ಮಾ । ಮಗಗಾ ಮ ಪ ಮ ॥
ನ ಜ ಯ ಚಾ ಮ ರಾ ಜ ನಂ ಶ ವ ರ್ಧ

ಪಾ ,
ನ .

ಗರಳಪುರಿಕ್ಷೇತ್ರ ಪರಿಪಾಲನ

ತ್ರಿಮಕುಟವಾಸ ವಿನುತ ಚರಣ (ನಂಜುಂಡೇಶ್ವರ)

* * *

೧೧

ರಾಗ : ಸಾರಂಗ ತಾಳ : ಮಿಶ್ರಛಾಪು ಎಣಿಕೆ : ಒಂದು ಕಳೆ

೬೫ನೇ ಮೇಳ ಮೇಚಕಲ್ಯಾಣಿಯಲ್ಲಿ ಜನ್ಯ

ಆರೋಹಣ : ಸ ರಿ ಗ ಮ ಪ ನಿ ಸ

ಅವರೋಹಣ : ಸ ದಾ ಪ ಮ ರಿ ಗ ಮ ರಿ ೯ ಸ ಶು

ಚ.ರಿಷಭ, ಅಂ.ಗಾಂಧಾರ, ಪ್ರ.ಮಧ್ಯಮ, ಚ.ದೈವತ, ಕಾ.ನಿಷಾದ

ಪಲ್ಲವಿ

॥ ಪಾ ಪ ಮ ಗಾ ಪಾ ; ; ಪಾ ॥ ಪ ದ ಪ ಮ ರಿ ೯ ಗಾ ಮಾ ರಿ ೯ ; ॥
ಮ ಹಾ ಮಾ ಯೆ ಬಾ ತಾ

॥ ಸಾ ; ; ; ; ಸಾ , ನಿ ॥ ಸಾ ರಿ ೯ ಸಾ ಸಾ ರಿ ೯ ಗಾ ಮಾ ॥
ಯೇ ತಾ ಯೇ

೨ ॥ ಪಾ ಪ ಮ ಗಾ ಪಾ ; ; ಪಾ ॥ ದ ದ ಪ ಮ ರಿ೯ ಗಾ ಮಾ ರಿ೯ ; ॥
ಮ ಹಾ ಮಾ ಯೆ ಬಾ ತಾ

॥ ಸಾ ; ; ; ; ಸಾ , ನಿ ॥ ಸಾ ರಿ ೯ ಸಾ ಸಾ ರಿ ೯ ಗಾ ಮಾ ॥
ಯೇ ತಾ ಯೇ

೩ ॥ ಪಾ ಪ ಮ ಗಾ ಪಾ ; ; ಪಾ ॥ ಮ ಪ ದಾ ನಿ ದ ಪ ಮ ರಿ ೯ ಗಾ ಮಾ ರಿ೯ ; ॥
ಮ ಹಾ ಮಾ ಯೆ ಬಾ ತಾ

॥ ಸಾ ; ; ; ; ಸಾ , ನಿ ॥ ಸಾ ರಿ ೯ ಸಾ ಸಾ ರಿ ೯ ಗಾ ಮಾ ॥
ಯೇ ತಾ ಯೇ

೪ ॥ ಪಾ ಪ ಮ ಗಾ ಪಾ ; ; ; ॥ ಪ ದ ಪ ಮ ರಿ ೯ ; ; ; ; ॥
ಮ ಹಾ ಮಾ ಯೇ

॥ ಗಾ ; ; ; ; ; ; ॥ ಗ ಮ ಪ ಮ ರಿ ೯ ; ; ; ; ॥
ಬಾ ತಾ

॥ ಸಾ ; ; ; ; ; ; ॥ ॥
ಯೇ (ಮಹಾಮಾಯೆ)

## ಅನುಪಲ್ಲವಿ

॥ ; ಮಾ ಪಾ ದಾ ; ಪಾ ; ॥ ಸಾ ಸ ನಿ ದ ನಿ ಸಾ ಸಾ ಸಾ ; ॥
ಸ್ವ ರ ವ ರ್ಣ ಶ್ರು ತಿ ವಿ ನು ತೆ

॥ ; ದಾ ನಿ ೯ ಸ ರಿ ಗ ರಿ ಸಾ ; ॥ ನಿ ೯ ದಾ ರಿ ಸ ಸ ನಿ ದಾ ಪಾ ; ॥
ಲ ಯ ಪ್ರೀ ತೇ ರ ಸ ವಿ ಧಾ ತೆ

॥ ; ರಿ ೯ ರಿ ೯ ಸಾ ; ; ಸಾ ॥ ದಾ ಸ ನಿ ಸಾ ಸ ನಿ ದಾ ಪಾ ; ॥
ಸ್ತುಲಿ ತಿ ಪೂ ರ್ಣ ಸಂ ಗೀ ತೇ

॥ ಮ ಪ ದ ನಿ ಸ ರಿ ಸ ನಿ ದಾ ಪಾ ; ॥ ಪ ದ ಪ ಮ ಪ ಮ ರಿ ಗ ಮ ರಿ ಸ ರಿ ಗ ಮ ॥
ಲೋ ಕ ಮಾ ತೇ ಸ ರ ಸ್ವ ತಿ ಯೆ

(ಮಹಾಮಾಯೆ)

## ಚರಣ

॥ ಸಾ ೯ ಸಾ ೯ ರಿ ಸ ಸಾ ಸಾ ; ॥ ಪ ಮ ಗಾ ಮಾ ಪಾ ; ಪಾ ; ॥
ಮ ನೋ ಭಾ ವ ಭಾ ವ ಪೂ ರ್ಣೆ

॥ ಪಾ ; ಮಾ ಪಾ ದಾ ಪಾ ಮಾ ॥ ರಿ ೯ ಗಾ ಮಾ ರಿ ೯ ; ಸಾ ; ॥
ಪೂ ರ್ಣ ಪು ಣ್ಯ ಸ್ವ ರೂ ಪೆ ದೇ ವಿ

॥ ಸಾ ಸಾ ರಿ ೯ ಸಾ ; ಸಾ ; ॥ ಪಾ ಪ ಮ ದಾ ಪಾ ; ; ಪಾ ॥
ಸ ರ ಸ ರಾ ಗ ಸ ಮ ವಿ ಭಾ ಗೆ

॥ ಮ ಪ ದ ನಿ ಸ ರಿ ಸ ನಿ ದಾ ಪಾ ಪಾ ॥ ಪ ಮ ರಿ ೯ ಗಾ ಮಾ ; ಪಾ ; ॥
ಶ್ರೀ ವಿ ಶಾ ರ ದ ಶಾ ರ ದಾಂ ಬೆ

ಜಯ ಚಾಮರಾಜೇಂದ್ರ ಕುಲಮಾತೆ ವಿಜಯದಾತೆ
ತ್ರಿಮಕುಟ ನಿರ್ಮಾತೆ ನಮಸ್ತೆ ನಮಸ್ತೆ (ಅನುಪಲ್ಲವಿಯಂತೆ)

* * *

೧೨

ರಾಗ : ವಿಜಯನಾಗರಿ ತಾಳ : ಆದಿ ಎಣಿಕೆ : ಒಂದು ಕಳೆ

ಆರೋಹಣ : ಸ ರಿ ಗ ಮ ಪ ದ ಸ

ಅವರೋಹಣ : ಸ ದ ಪ ಮ ಗ ರಿ ಸ

೫೯ನೇ ಮೇಳ ಧರ್ಮವತಿಯಲ್ಲಿ ಜನ್ಯ

ಚ.ರಿಷಭ, ಸಾ.ಗಾಂಧಾರ, ಪ್ರ.ಮಧ್ಯಮ, ಚ.ದೈವತ

ಪಲ್ಲವಿ

॥ ; ; ; ಪಾ ಮಾ ಗಾ ; ರಿ ೯ । ಸಾ ; ; ; । ; । ಧಾ ಸಾ ॥
ಲ ಲಿ ತಾಂ ಬಿ ಕೆ ಮಾಂ

॥ ರಿ ೯ ಗಾ ಮಾ ಪ ದ ಪ ಮ ಗಾ ; ರಿ ೯ । ಸಾ ; ; ದ ಸ । ರಿ ೯ ಸ ರಿ ಗಾ ಪ ಮ ॥
ಪಾ ಹಿ ಲ ಲಿ ತಾಂ ಬಿ ಕೆ ಮಾಂ ಪಾ

॥ ಗ ರಿ ಸ ರಿ ಗ ಮ ಪ ದ ಪ ಮ ಗಾ ಗಾ ರಿ ೯ । ಸಾ ; ; ಧ ಸ । ರಿ ಗ ಸ ರಿ ಗ ಮ ಪ ಮ ॥
ಹಿ ಲ ಲಿ ತಾಂ ಬಿ ಕೆ ಮಾಂ ಪಾ

॥ ಗ ರಿ ಸ ರಿ ಗ ಮ ಪ ದ ಸ ದ ಪ ಮ ಗಾ ರಿ ೯ । ಸ ರಿ ೯ ೯ ; ; । ಗ ರಿ ಸ ಧ ಸಾ ; ॥
ಹಿ ಲ ಲಿ ತಾಂ ಬಿ ಕೆ

ಅನುಪಲ್ಲವಿ

॥ ; ; ; ಪಾ ಪಾ ದಾ ; ದಾ । ಸಾ ; ; ದಾ । ಸಾ ರಿ ೯ ಗಾ ಸಾ ॥
ಶಿ ವ ಸುಂ ದ ರೀ ಶ್ರಿ ತ ಶು ಭ ಕ

॥ ರಿ ೯ ; ; ಸ ರಿ ಗಾ ರಿ ೯ ; ಗಾ । ಸಾ ರಿ ೯ ಸಾ ಸ ರಿ । ಸ ದ ದ ಸ ದ ಪ ಪ ಮ ॥
ರೀ ಶ್ರಿ ಲೋ ಕ ಕು ಶ ಲ ಕ ರಿ ಗೌ

॥ ಗ ರಿ ಸ ರಿ ಗ ಮ ॥
ರಿ (ಲಲಿತಾಂಬಿಕೆ)

ಚರಣ

॥ ; ; ; ಪಾ ಪಾ ಪಾ ; ಪಾ । ಮ ಪ ದ ಪ ದಾ ಪ ದ । ಸ ದ ಪಾ ; ಪ ಮ ॥
ಜ ಗ ದಾ ದಿ ಮಾ ಯೇಸ ದ ಯೆ ನಿ

॥ ಗರಿಸರಿಗಪ್ಮ ಪಾ ಪಾ ಪ ಮ ಗಾ ರೀ । ಸ ರೀ ಸಾ , ಧಾ । ಸಾ ರೀ ಗಾ ಮಾ ॥
ರ ಪಾ ಯೆ ವೇ ದ ಶೀ ರ್ಷ ಗೇ ಯೆ ವಿ ಮ ಲ ಛಾ

॥ ಪಾ ; ; ॥
ಯೆ

॥ ; ; ; ಪಾ ಪಾ ದಾ ; ದಾ । ಸಾ ; ; ದಾ । ಸಾ ರೀ ಗಾ ಸಾ ॥
ಮ ಹಿ ಮಾ ಕ ರೆ ಮ ಧು ಪ ಚಿ ಕು

॥ ರೀ ; ; ಸ ರಿ ಗಾ ರೀ ; ಗಾ । ಸಾ ರೀ ಸಾ ಸ ರಿ । ಸ ದ ದ ಸ ದ ಪ ಪ ದ ॥
ರೆ ಮಾ ರಾ ರಿ ವಿ ನು ತೆ ಸ ರ ಸಿ ಜ ಮಧುಕ ರಿ ನ ರ

॥ ಪ ಮ ಗ ರಿ ಗ ಮ
ಹ ರಿ ಸೋ ದ ರಿ (ಲಲಿತಾಂಬಿಕೆ)

* * *

## ೧೩

ಎಣಿಕೆ : ಒಂದು ಕಳೆ

ರಾಗ : ಖರಹರಪ್ರಿಯ ತಾಳ : ಆದಿ

೨೨ನೇ ಮೇಳರಾಗ

ಆರೋಹಣ : ಸ ರಿ ಗ ಮ ಪ ದ ನಿ ಸ

ಅವರೋಹಣ : ಸ ನಿ ದ ಪ ಮ ಗ ರಿ ಸ

ಚ.ರಿಷಭ, ಸಾ.ಗಾಂಧಾರ, ಶು.ಮಧ್ಯಮ, ಚ.ಧೈವತ, ಕೈ.ನಿಷಾದ

### ಪಲ್ಲವಿ

॥ ; ; ; ಸಾ ಸಾ ರೀ ; ಗಾ । ಮಾ ; ; ಪ ದ । ನೀ ದಾ ; ಪಾ ॥
ನ ವ ನಂ ದಿ ನಿ ನಾ ರಾ ಯ

೨ ॥ ಮ ಗಾ ರಿ ಸ ನಿ । । ನಿ ಸ ನೀ ; ದ ಪ ॥
ಣಿ ನ ವ ನಂ ದಿ ನಿ ನಾ ರಾ ಯ

೩ ॥ ಮ ಗಾ ರಿ ಸ ನಿ । । ನಿ ಸ ರಿ ಗ ರಿ ಸ ನಿ ದ ॥
ಣಿ ನ ವ ನಂ ದಿ ನಿ ನಾ ರಾ ಯ

॥ ಪ ಮ ಗ ರಿ ಸ ನಿ ॥
ಣಿ (ನವನಂದಿನಿ)

### ಅನುಪಲ್ಲವಿ

॥ ; ; ; ಪ ದ ನೀ ದಾ ; ಪಾ । ಮಾ ; ಮಾ ಪ ದ । ನೀ ದ ನಿ ಸಾ ನೀ ॥
ಜ ಯ ಚಾ ಮ ರಾ ಜ ಪ್ರಿ ಯ ಪೂ ಜಿ

೨ ॥ ಸಾ ; ; ಪ ದ ನೀ ದಾ ; ಪಾ । ಮಪ ದಾನಿದ ಪಮಪದ । ನೀ ದ ನಿ ಸಾ ನೀ ॥
ನಿ ಜ ಯ ಚಾ ಮ ರಾ ಜ ಪ್ರಿ ಯ ಪೂ ಜಿ

॥ ರಿ ಸ ನಿ ದ ನಿ ಸ ಗಾ ರೀ ಸಾ ; ನೀ । ದಾ , ನೀ ಪ ದ । ನಿ ದ ನಿ ದ ಪ ಮ ಗ ಮ ॥
ನಿ ಮ ಹಿ ಶೂ ರ ಶ್ರೀ ಸಂ ವ ರ್ಧಿ

॥ ಪ ಮ ಗ ರಿ ಸ ನಿ ॥
ನಿ

## ಚಿಟ್ಟೆಸ್ವರ

॥ ; ; ; ಸ ರಿ ೯ ಗ ಮ ಗ ರಿ ಗ । ೯ ಮ ಪ ಮ ಗ ಮ ಪ ದ । ೯ ನಿ ದ ಪ ಮ ಗ ಮ ಪ ॥
॥ ದ ನಿ ಸಾ ; ಗ ರಿ ಸಾ ನಿ ದ ಪ ದ ರಿ ಸ । ನಿ ೯ ದ ಪ ಮ ಪ ದ ಪ । ಮಾ ಗ ರಿ ಸ ರಿ ಪ ಮ ॥
॥ ಗ ರಿ ಸಾ ; ರಿ ಗ ಮ ಪ ದ ನಿ ಸ ರಿ ಗ ಮ । ಗ ರಿ ಸಾ ; ರಿ ಸ । ನಿ ದ ಪ ಮ ಗ ರಿ ಗ ಮ ॥
॥ ಗ ರಿ ಸಾ ; ರಿ ಗ ಮ ಪ ದ ನಿ ಸ ರಿ ಗಾ । , ರಿ ೯ ಸ ನಿ ದ ನಿ ೯ । , ದಾ ಪ ಮ ಗ ಮಾ ॥
॥ , ಗಾ ರಿ ಸ ನಿ ॥

(ನವನಂದಿನಿ)

## ಚರಣ

॥ ; ; ; ಪಾ ಪಾ ಪಾ ; ಮಾ । ದಾ ಪಾ ದಾ ನಿ ೯ । ದಾ ಪಾ ಮಾ ಗಾ ।
ಯ ದು ರಾ ಜ ಯೋ೯ ಗ ಸಂ ಜೀ೯ ವಿ

॥ ರಿ ೯ ಗಾ ಮಾ ಪಾ ಮಾ ಮ ಪ ಗಾ ರಿ ೯ । ಸಾ ರಿ ೯ ನಿ ೯ ಸ ರಿ । ಗ ರಿ ಗಾ ; ಗಾ ।
ನೀ೯ ಇ ದು ಸ ಮ ಯ ವ ಮ್ಮ ಗು ಣ ಭೂ ಷಿ

॥ ಮಾ ; ; ॥
ಣೆ

ನವನವೋನ್ಮಣಿ ಮಾಂ ಪಾಹಿ ಜನನಿ
ತ್ರಿಮುಕುಟಪುರ ಶ್ರೀ ವಾಸಿನಿ (ನವನಂದಿನಿ)

* * *

೧೪

ರಾಗ : ತೋಡಿ ತಾಳ : ಆದಿ

ಎಣಿಕೆ : ಒಂದು ಕಳೆ

೮ನೇ ಮೇಳ ರಾಗ

ಆರೋಹಣ : ಸ ರಿ ಗ ಮ ಪ ದ ನಿ ಸ

ಅವರೋಹಣ : ಸ ನಿ ದ ಪ ಮ ಗ ರಿ ಸ

ಶು.ರಿಷಭ, ಸಾ.ಗಾಂಧಾರ, ಶು.ಮಧ್ಯಮ, ಶು.ದೈವತ, ಕೈ.ನಿಷಾದ

ಪಲ್ಲವಿ

॥ ಸ ರಿ ಗಾ ; ಮಾ ದಾ ನಿ ೯ ಸಾ ; । ಸ ರಿ ನಿ ೯ ದ ಪ ಮಾ । ಮ ಗ ಪ ಮ ಗ ರಿ ಸ ನಿ ॥
ಪ್ರ ಸ ನ್ನ ಸೀ ತಾ ರಾ ಮ ಚಂ ದ್ರ

೨ ॥ ದ ನಿ ಸ ರಿ ಗ ರಿ ಸಾ । ದ ನಿ ಸಾರಿಸ ನಿ ದ ಪ ಮ । ॥
ಪ್ರ ಸ ನ್ನ ಸೀ ತಾ ರಾ ಮ ಚಂ ದ್ರ

॥ ಪ ದ ನಿ ೯ ದಾ ಮಾ ಮಾಪಮ ಗಾ ರಿ ೯ ಸಾ । ; ಸ , ಗ ಮಾ । ದ ಪ ಪ ಮ ಗ ರಿ ಸ ನಿ ॥
ಪಾ ಹಿ ಪಾ ಹಿ ಸ ದ್ಗುಣ ಸಾಂ ದ್ರ

(ಪ್ರಸನ್ನ)

ಅನುಪಲ್ಲವಿ

॥ ; ಪ ದ , ನಿ ಸಾ ಸ ನಿ ದ ಪ ದಾ ಮಾ । ; ದ ನಿ ಸಾ ಸಾ । ಸ ನಿ ಗ ರಿ ಸಾ ಸಾ ॥
ಗಾ ನ ವಿ ಶಾ ರ ದ ಕೃ ಷ್ಣ ಸ್ಥಾ ಪಿ ತ

॥ ; ದ ಗ , ರಿ ಸಾ ಸ ನಿ ದ ಪ ದ ನಿ ಸಾ । ; ಸ ನಿ ೯ ದ ಪಾ । ಮ ಗ ಪ ಮ ಗ ರಿ ಸ ನಿ ॥
ಮ ಹಿ ಷೂ ರ ಪು ರ ಪ ರಿ ಪಾ ಲಿ ತ

(ಪ್ರಸನ್ನ)

ಚರಣ

॥ ; ಪ ಪ , ದ ಪಾ ಪಾ ಪಾ ದಾ ಪಾ । ; ಮ ಪ , ಮ ಗಾ । ಗಾ ಮಾ ಪಾ ಪಾ ॥
ದ ಶ ರ ಥ ನಂ ದ ನ ದ ಶ ಶಿ ರ ಖಂ ಡ ನ

॥ ; ಪ ದ , ಪಾ , ಪ ಪ ಮ ಗ ರಿ ೯ ಸಾ । ; ಸ ರಿ , ಗ ಮಾ । ಪ ಗ ಮಾ ಪಾ ಪಾ ॥
ದ ಶ ದಿ ಕ್ಪಾ ಲ ನ ಧ ರ್ಮ ಸಂ ಸ್ಥಾ ಪ ನ

ಸೀತಾ ಲಕ್ಷ್ಮಣ ಭರತ ರಿಪುಘ್ನ
ಮಾರುತಿ ಸೇವಿತ ತ್ರಿಮಕುಟವಾಸನುತ ॥ ಪ್ರಸನ್ನ (ಅನುಪಲ್ಲವಿಯಂತೆ)

* * *

೧೫

ರಾಗ : ಕುಂತಲವರಾಳಿ  ತಾಳ : ಆದಿ  ಎಣಿಕೆ : ಒಂದು ಕಳೆ

ಆರೋಹಣ : ಸ ಮ ಪ ದ ನಿ ದ ಸ  
ಅವರೋಹಣ : ಸ ನಿ ದ ಪ ಮ ಸ

೨೮ನೇ ಮೇಳ ಹರಿಕಾಂಭೋಜಿಯಲ್ಲಿ ಜನ್ಯ  
ಶು.ಮಧ್ಯಮ, ಚ.ದೈವತ, ಕೈ.ನಿಷಾದ

## ಪಲ್ಲವಿ

, , , ಸ ಮ ಪ ದ ನಿ । ದಾ , ದ । ಸ ನಿ ದ ಪ ॥  
ಶ ರ ವ ಣ ಭ ವ ಷ ಣ್ಮು ಖ ನೆ

ನಿದದಪಮಾ । ದಾ ; ದ ಸ । ಮ ಮ ಸ ಸ ನಿ ನಿ ದ ಪ ॥  
ಸ್ವಾ ಮಿ ಶ ರ ವ ಣ ಭ ವ ಷ ಣ್ಮು ಖ ನೆ

ನಿದದಪಮಾ ಮಾ ಮಾ ಸಾ ; ನಿ ಧ । ಸಾ , ಮ । ಪ ದ ನಿ ದ ॥  
ಸ್ವಾ ಮಿ ಶ ರ ಣಾ ಗ ತ ರ ಕ್ಷ ಕ ನೆ

ನಿದದಪಮಾ ಸ ಮ ಪ ದ ನಿ । ದಾ ; । ; ನಿ ದ ಪ ಮ ॥  
ಸ್ವಾ ಮಿ ಶ ರ ವ ಣ ಭ ವ

ದಾ , (ಶರವಣಭವ)

## ಅನುಪಲ್ಲವಿ

, , , ಮ ಪ ನಿ ನಿ ದ ದಾ । ಸಾ , ಸ । , ನಿ ನಿ ದ ದ ಪ ॥  
ಪ ಳ ನಿ ವಾ ಸ ಸ್ವ ಪ್ರ ಕಾ

ಮಾ , । ಸಾ , ದ ಸ । ಮ ಸ ನಿ ದ ಪ ನಿ ॥  
ಶ ಪ ಳ ನಿ ವಾ ಸ ಸ್ವ ಪ್ರ ಕಾ

ದ ದ ಮಾ ; ಸ ಸ ಸ , ನಿ । ನಿ ದ ದಾ ; ನಿ ದ । ಸ ನಿ ನೀ ನಿ ದ ದ ಪ ॥  
ಶ ಸು ರ ಸೇ ವಿ ತ ಸು ಬ್ರ ಹ್ಮ

ನಿ ದ ದ ದ ಮಾ  
ಣ್ಯ (ಶರವಣಭವ)

ಚರಣ

॥ , , , ಮ ಮ ಸ , ಸ । ಮಾ , ಮಾ , ಪಾ । ಪ ಪ ದ ನಿ ॥
ವ ಳ್ಳಿ ದೈ ವ ಯಾ ನೆ ಮು ಸೋ ವ ಲ್ಲ

॥ ದಾ , ನಿ ದ ಪ ದ ಪ । ಮಾ , ಸಾ ಸಾ । ಸ ಮಾ ಮ ॥
ಭ ಮಾ ರಾ ರಿ ನು ತ ಸು ಕು ಮಾ ರ

॥ ಪಾ ,
ನೆ

ಓಂಕಾರ ಪ್ರಣವಾರ್ಥ ನಿರೂಪಣ
ತ್ರಿಮುಕುಟವಾಸ ವಿನುತ ಚರಣ ॥ (ಅನುಪಲ್ಲವಿಯಂತೆ)

* * *

ಚರಣ

॥ , , , ಮಾ ಮ ಮಾ ; ಗಮಪಮಗರಿಗಾ ಮಾ । ಪಾ ; ; ದಪದಾ । ; ; ನಿ ದ ಪ ಮ ॥
ಕಾ ಮಿ ತ ವೀ ವ ಕೃ ಪಾ ಳು

೧ ॥ ಪದ ಮಪದಾನಿದಪಮಪಮಗಾಮಾ ; ಮದಪಮಗಾಗಮ । । ॥
ಕಾ ಮಿ ತ ವೀ ವ ಕೃ ಪಾ ಳು

॥ ; ನಿ ದಾ ನಿ ಪಾ ನಿ ದ ದ ಪ ಮ ಗ ಗ ರಿ । ಸಾ ಪಾ ; ಪಮಗಾಮಾ । ಗಾ,ಮ ಪಾ ಮ ಪಾ ॥
ದ ಯಾ ಕ ರ ಶ್ರೀ ಚಂ ದ್ರ ಶೇ ಖ ರ

ದಿಗಂಬರ ಧೀರ ಬಭುಂ ಬಭುಂ ಭಜ ನಾಟ ಡಮರುನುತ
ನೂನಯೋಗಿ ಶ್ರೀ ತ್ರಿಮುಕುಟ ವಾಸವಿನುತ (ಅನುಪಲ್ಲವಿಯಂತೆ)

* * *

೧೭

ರಾಗ : ಆನಂದಭೈರವಿ    ತಾಳ : ಖಂಡಛಾಪು

ಆರೋಹಣ : ಸ ಗ ರಿ ಗ ಮ ಪ ದ ಪ ಸಾ    ೨೦ನೇ ಮೇಳ ನಠಭೈರವಿಯಲ್ಲಿ ಜನ್ಯ (ಭಾಷಾಂಗ ರಾಗ)

ಅವರೋಹಣ : ಸ ನಿ ದ ಪ ಮ ಗ ರಿ ಸ    ಚ.ರಿಷಭ, ಸಾ.ಗಾಂಧಾರ, ಶು.ಮಧ್ಯಮ, ಚ.ದೈವತ, ಕೈ.ನಿಷಾದ

ಪಲ್ಲವಿ

॥ ಪಾ ಪಮಗರಿಸಾ ॥ ನಿ ಸ ಗ ರಿ ಸ ॥ ; ನಿ ಸಾ ಮ ಗಾ ರೀ ॥ ಗಮಪಮ ಪಮಗರಿಗಮ ॥
ಶ್ರೀ ರಾ ಮ ಜ ಯ ರಾ ಮ ಜ ಯ ಜ ಯ ರಾ ಮ ರಾ ಮ

೧ ॥ ಪಾ ಗಮಪಮಗರಿ ॥ ನಿ ಸ ಪಮಗರಿಸಾ ॥ ॥ ॥
ಶ್ರೀ ರಾ ಮ ಜ ಯ ರಾ ಮ ಜ ಯ ಜ ಯ ರಾ ಮ ರಾ ಮ
(ಶ್ರೀರಾಮ)

ಅನುಪಲ್ಲವಿ

॥ ಪಾ ಸಾ ಸ ॥ ಸನಿರಿಸ ನಿದಪಾಪಾ ॥ ; ಗಮಪಾಪಾಮಾ ॥ ಗಮಪಮ ಪಮಗರಿಗಮ ॥
ಶೃಂ ಗಾ ರ ರಾ ಮ ತ ವ ಪಾ ದ ಭ ಕ್ತಿಂ ದೇ ಹಿ ದೇ ಹಿ
(ಶ್ರೀರಾಮ)

ಚರಣ

॥ ; ಗಮ ಪಾ ಪ ॥ ಪ ಪ ಪದನೀಪಾ ॥ , , , ಮಗಮಪಾಮ ॥ ಪಮಗರಿ ಗ ಗ ಮ ॥
ಅಮ ರೇಂ ದ್ರ ನು ತ ನಾ ಮ ಅಂ ಬು ಜಾಕ್ಷ ಶ್ರೀ ರಾ ಮ

॥ ; ಗಮಾ ಪಪಮಗರಿ ॥ ಸ ಸ ಸನಿಗರಿಸಾ ॥ ನೀಸರೀ ಸಪಮಗರಿ ॥ ,ಗಮಾ ಪಾ ಪ ॥
ಅಂ ಗದಾ ಶ್ರಿ ತ ರಾ ಮ ಅ ಯೋ ಧ್ಯಾ ಧಿ ಪ ರಾ ಮ

॥ ; , ಪಾಪ ಪಾನಿಪ ಮಾ ॥ ಪಾಸನಿ ಸಾ ಸ ॥ ನಿ ಸ , ಮಗಾರೀ ॥ ಸ ನಿ ಸಾ ಸ ॥
ಮಾರುತಿ ಪ್ರಿ ಯ ರಾ ಮ ಮಾ ಮನೋ ಹ ರ ರಾ ಮ

॥ ; ಮಪ , ಸ ಸಾ ॥ ಸನಿರಿಸ ನಿದಪಾಪಾ ॥ ; ಗಮಾ ಪಪಾಮಾ ॥ ಗಮಪಮ ಪಮಗರಿಗಮ ॥
ತ್ರಿಮ ಕುಟ ವಾ ಸ ನುತ ಶ್ರೀ ಪ್ರಸನ್ನ ಸೀ ತಾ ರಾ ಮ
(ಶ್ರೀರಾಮ)

* * *

## ೧೮

12 ✓ ರಾಗ : ನಳಿನಕಾಂತಿ ತಾಳ : ಆದಿ ಎಣಿಕೆ : ಒಂದು ಕಳೆ

ಆರೋಹಣ : ಸ ಗ ರಿ ಮ ಪ ನಿ ಸ — ೨೭ನೇ ಮೇಳ ಸರಸಾಂಗಿಯಲ್ಲಿ ಜನ್ಯ

ಅವರೋಹಣ : ಸ ನಿ ಪ ಮ ಗ ರಿ ಸಾ — ಚ.ರಿಷಭ, ಅಂ.ಗಾಂಧಾರ, ಶು.ಮಧ್ಯಮ, ಕಾ.ನಿಷಾದ-

### ಪಲ್ಲವಿ

॥ ಸ ಗ ರಿ ಮಾ ಪ ನಿ ಪ । ಸಾ , ನಿ । ಪ ಮ ಗ ರಿ ॥
ನಾ ದಿರ್ ತ ನೋಂ ತ ನ ನ ಧೀಂ ತ ನ ದಿ ರೆ ನ

೧ ॥ । ರಿ ರಿ ಸ ನಿ ಸ ನಿ । ॥
ನಾ ದಿರ್ ತ ನೋಂ ತ ನ ನ ಧೀಂ ತ ನ ದಿ ರೆ ನ

೨ ॥ । ನಿ ಸ ಗ ರಿ ಮ ಗ ರಿ ಸ । ಸ ನಿ ಪ ಮ ಗ ರಿ ಸ ನಿ ॥
ನಾ ದಿರ್ ತ ನೋಂ ತ ನ ನ ಧೀಂ ತ ನ ದಿ ರೆ ನ

### ಅನುಪಲ್ಲವಿ

॥ ಪ ಪ ಪ ನಿ ಮ ಪ ನಿ ನಿ । ಸ ಸ ಸ ಸ । ಸ ಸ ಸ ಸ ॥
ನಾ ದಿರ್ ದಾ ನಿ ತೊಂ ದಿರ್ ದಾ ನಿ ಧಿ ಲ್ಲಿ ಲ್ಲ ಧಿ ಲ್ಲಿ ಲ್ಲ ತಾ ನಿ

॥ ಗ ರಿ ಸ ಸ ನಿ ಪ ರಿ ಸ । ನಿ ಪ ಮ ಮ । ಗ ರಿ ಸ ನಿ ॥
ತ ಕಿ ಟ ಧಿ ಮಿ ತ ತ ಕ ಧಿ ಮಿ ತ ತ ದಿ ಗಿ ಣ ತೊಂ

### ಚರಣ

॥ ಪಾ ಪ ಮಾ ಪ ಗಾ ಗ ರೀ ರಿ ಮ ಗ ರಿ ಸ । ಸ ನಿ ಪ ಮ ಸ ಗ ರಿ ಮ । ಪ ಸ ನಿ ಪ ಮ ಗ ರಿ ಸ ॥
ನಿ ನ್ನ ನೋಡಿ ಧ ನ್ಯನಾ ದೆ ಹ ರಿ ವ ರ ಪು ತ್ರ ನಿ ನ ಗೆ ವಂ ದಿ ಪೆ ದ ಯ ನೀ ಡ್ವೆ

॥ ಪಾ , ನಿ ನಿ ಪ ಮ ಪ ನಿ ನಿ ಪ ಮ ಗ ರಿ ಸ ನಿ । ಸಾ ಸ ಗ ರಿ ಮ ಪ ನಿ । ಪ ಸ ನಿ ಪ ನಿ ಮ ಪ ನಿ ॥
ತಾಂ ತ ಕಿ ಟ ತ ತ ಧಿ ಮಿ ತ ತ ಝಣುತ ಕ ತೊಂತ ದಿ ರೆ ನ ತ ಕುಂ ತ ರಿ ಕಿ ಟ ಝಣು ತ ಕ

॥ ಸಸಗರಿಸ ಗರಿಪ ಮಪ ಸ ನಿ ಪಮಪ ಪಮಗರಿ ಸ । ಸಾ ಗರಿಮ ಪನಿ ಸಾಸ । ನಿಸ ಮ ಗರಿ ಮ ಗ ರಿ ಸ ನಿ ॥

ತಕತಕಿಟ ತಕಝ್ಣುಣುತ ನಾದ್ರಿದ್ರಿದಿನ ತದಿ ಗಿಣತೊಂ ತೊಂ ತದಿನ ತಧಿಂತಾಧಿಂ ತಧಿಂತಾಧಿಂ ತ ದಿಗಿಣತೋಂ

॥ ಗ ರಿ ಸ ನಿ ಪ ಗಾ ರೀ ಸ ನಿ ಸ ರೀ ಸಾನಿ ಪ ನಿ ಸ । , ನೀ ಪ ಮ ಪ ನೀ ಪಾ । ಮಗಮ ಪಾ ಮಾಗರಿನಿ ॥

ತ ಧಿ ಗಿಣತೊಂ ತಾ ಧೀಂ ಗಿ ಣತೊಂ ತಾಧೀಂಗಿಣತೊಂತ ಧೀಂಗಿ ಣ ತೊಂ ತ ಧೀಂ ಗಿ ಣತೊಂ ತಾಧೀಂಗಿಣತೊಂ

ಕೊನೆಯ ಎರಡಾವರ್ತಗಳನ್ನು ಖಂಡನಡೆಯಲ್ಲಿ ಹಾಡತಕ್ಕದ್ದು.

* * *

## ೧೯

ರಾಗ : ಕಾಪಿ  ತಾಳ : ಆದಿ  ಎಣಿಕೆ : ಒಂದು ಕಳೆ

ಆರೋಹಣ : ಸ ರಿ ಮ ಪ ನಿ ಸ̇
ಅವರೋಹಣ : ಸ̇ ನಿ ದ ನಿ ಪ ಮ ಗ ರಿ ಸ

೨೨ನೇ ಮೇಳ ಖರಹರಪ್ರಿಯದಲ್ಲಿ ಜನ್ಯ (ಭಾಷಾಂಗ ರಾಗ)
ಚ.ರಿಷಭ, ಸಾ.ಗಾಂಧಾರ, ಶು.ಮಧ್ಯಮ, ಚ.ದೈವತ, ಕೈ.ನಿಷಾದ

### ಪಲ್ಲವಿ

॥ ಸ̇ಾ , ನಿ । ಪ ಮ ಪ ಗಾ ರಿ ರಿ । ಸ ರಿ ನಿ । ಸಾ ; ನಿ ಸ । ರಿ ಮ ರಿ ಸ ರಿ ಮ ಪ ರಿ̇ ॥
ಧೀಂ ಧೀಂ ತ ನ ನ ಧೀಂತ ಧೀಂ ತ ದಿ ರೆ ನಾ ನಾದಿರ್ ತೊಂದಿರ್ ತಾ ನಿ ತದಾ ನಿ

### ಅನುಪಲ್ಲವಿ

॥ ಪಾ , ನಿ । , ಮ ಪ ನಿ । ಸ̇ ರಿ̇ ಗ ರಿ̇ ಸ̇ ನಿ । ಸ̇ಾ , ರಿ̇ ಗ ರಿ̇ ಸ̇ ರಿ̇ । ಸ̇ ನಿ । ಗ ರಿ̇ ಸ̇ ನಿ ಪ ॥
ತಾ ಧೀಂ ತ ಕ ಧೀಂ ತ ದಿ ರ ನ ಧಿ ಮಿ ತಾಂ ಕಿ ಟ ತ ಝಣು ತ ಧೀಂ ಧೀಂ ಗಿ ಣ ತೊಂ

॥ ಪ ನಿ ಸ̇ ರಿ̇ ಮ ಗ ರಿ̇ ಸ̇ ನಿ ದ ನಿ ಪ ನಿ ಸ̇ ಸ̇ಾ । ನಿ ಮ ಪ ಸ̇ ನಿ । ಪ ಮ । ರಿ ಸಾ ರಿ । ಮ ಪ ನಿ ॥
ನಾದಿರ್ ದಾನಿದಿರ್ ದಿರ್ ದಾನಿ ಕಿ ಟತಝಣು ತ ಧೀಂ ಗಿ ಣತೊಂ ತಧೀ ಗಿ ಣ ತೊಂ ತಧೀಂ ಗಿ ಣ ತೊಂ

### ಚರಣ

॥ ರೀ । ಮ ಪಾ ನಿ ಮಾ ಪ ನೀ । ಸ̇ ಗ ರಿ̇ ಸ̇ ನಿ । ದಾ ನಿ ಪಾ , ಮ ಗ । ಗ ರಿ ಸ ರಿ ಮ ಪಾ ನಿ ॥
ನಿ ನ್ನ ಜೂ ಚಿ ಧ ನ್ಯುಡೈ ತಿ ವ ರ ಗುಣ ಸಾಂದ್ರಶ್ರೀ ಜ ಯ ಚಾ ಮರಾ ಜೇಂದ್ರ

॥ ಸ̇ಾ ರಿ̇ ಸ̇ ನಿ ದ ನೀ ಸ̇ ನಿ ದ ನಿ ಪ ಮ ಗ ರಿ । ಸ ರೀ । ಸ ಮ ಗ ರಿ ಸ । ಸ ರಿ ಮ ಪನಿ ಸ̇ ರಿ̇ ಗ ॥
ತಾ ಕಿ ಟ ಝಣುತ ಝಣುತ ಕ ಧಿ ಮಿ ತ ಕ ತಿ ಲ್ಲಾ ನದಿರ್ ದಿರ್ ನಾದಿರ್ ಧಿ ತ್ತಿ ಲ್ಲಾ ನ ಧಿಲ್ಲಿ ಲ್ಲಾ ನಾ

॥ ರಿ̇ನಿಸ̇ ರಿ̇ ಸ̇ ಮ ಪ ನಿ ಸ̇ ರಿ̇ । ಸ̇ಾ ನಿ ಪ ಮ । ಸ̇ಾ ನೀ । ಪ ಮ ರಿ ಸ । , ರೀ । ಮಾ ಪಾ ರಿ̇ ॥
ಕಿಟತಝಣು ಧಿ ಮಿ ತ ಕ ತ ಧೀಂಗಿ ಣ ತೊಂ ತ ಧೀಂ ಗಿ ಣತೊಂತ ಧೀಂ ಗಿ ಣ್ಣಾ ತೊಂ

* * *

## ೨೦

ರಾಗ : ರೀತಿಗೌಳ          ತಾಳ : ಆದಿ          ಎಣಿಕೆ : ಒಂದು ಕಳೆ

ಆರೋಹಣ : ಸ ಗ ರಿ ಗ ಮ ನಿ ನಿ ಸಾ          ೨೨ನೇ ಮೇಳ ಖರಹರಪ್ರಿಯದಲ್ಲಿ ಜನ್ಯ

ಅವರೋಹಣ : ಸ ನಿ ದ ಮ ಗ ಮ ಪ ಗ ರಿ ಸ          ಚ.ರಿಷಭ, ಸಾ.ಗಾಂಧಾರ, ಶು.ಮಧ್ಯಮ, ಚ.ಧೈವತ, ಕೈ.ನಿಷಾದ

### ಪಲ್ಲವಿ

॥ ಪ ಮಾ ಗ ರಿ ಸ ನಿ ನಿ । ಸಾ , ಸ । ಗ ರಿ ಗ ಮ ॥
ತ ನೋಂ ತ ನ ನ ದಿ ರೆ ನಾ ತಿ ಲ್ಲಾ ನ ದಾ ನಿ

೧ ॥ ನಿ ದ ಮಾ ; ಪ ಮ ಗ ರಿ ಸಾ ನಿ ನಿ । ॥
ತಾ ನೋಂ ತ ನ ನ ದಿ ರೆ ನಾ ತಿ ಲ್ಲಾ ನ ದಾ ನಿ

೨ ॥ ದ ನಿ ಸ ನಿ ದ ಮ ಪ ಮ ಗ ರಿ ಸಾ ನಿ ನಿ । ಸಾ , ಸ । ಪ ಮ ಗ ರಿ ಗ ಮ ॥
ತಾ ನೋಂ ತ ನ ನ ದಿ ರೆ ನಾ ತಿ ಲ್ಲಾ ನ ದಾ ನಿ

॥ ಗ ಮಾ ದ ಪ ಮ ಗ ರಿ ಸಾ,ರಿಸನಿಧಾ ನೀ ನೀ । ಸಾ ; । ; : ॥
ತಾ ನೋಂ ತ ನ ನ ದಿ ರೆ ನಾ

೩ ॥ ಸ ನಿ ೯ ದ ದ ನಿ ಪ ದ । ನಿ ಸಾ ನಿ ದ ಮ ಪಾ । ಮ ಗ ರಿ ನೀ ಸ ಗ ಮ ॥
ತಾ ನೋಂ ತ ನ ನ ದಿ ರೆ ತ ಧೀಂಗಿ ಣತೊಂಧೀಂ ಗಿ ಣತೊಂಧೀಂಗಿಣತೊಂ

### ಅನುಪಲ್ಲವಿ

॥ ನಿ ೯ ದ ಮಾ ಮ ಗ ಮ ಪಾ । ಮಾ ಗ ಮ ಪ ಮ ಗಾ । ರಿ ನಿ ಸ ಸ ॥
ನಿ ನ್ನ ನ ಮ್ಮಿ ಯು ನ್ನ ವಾ ಡ ನು ರ ನ ನು

॥ ನಿ ಧ ನಿ ೯ ಸ ಸ ಸಾ । ಸ ಗ ರಿ ಗ । , ಮಾ ಮ ॥
ರ ಕ್ಷಿಂ ಪು ಮು ಶ್ರೀ ರಾ ಜ ಗೋ ಪಾ ಲ

## ಚರಣ

॥ ಪಾ , ಪ ನಿ ನಿ ದ ಮ ಗ ಮ ಪ ಮ ಗ ರಿ ಸಾ । ನಿ ಫಾ ಫ ನಿ ನಿ ಸ ಸ । ಸ ಗಾ ಗ ಮಾ ॥
ತಾಂ ಕುತ ಕ ಧಿ ಮಿ ತ ಕ ಝಣು ತ ಧೀಂತ ತ ಕ ಝಣು ತ ಧೀಂ ತ ತಾಂ

॥ ಮ ಗ ಮ ನಿ ನಿನಿ ಸ ಸಸ ಗ ರಿಗ ಮ ಗ ರಿಸ । ನಿ ರಿ ಸ ಸಾ ನಿದ ಮ । ಗ ಮ ನಿ ನಿ ಸಾ ; ॥
ತ ಕಿಟ ಧೀಂಕಿಟ ತೊಂಕಿಟ ನಂಕಿಟತ ಕ ದಿ ನ ತ ಧಿಂತ ತಾಂ ಕುಝಣು ನಾಧ್ರಿತಾನಿ ತೊಂ

॥ ಸ ನಿ ಸಾ ರಿ ಸ ನೀ ಸ ರಿ ಸಾ , ಗ ರೀ । ಸ ನಿ ಸಾ , ಗ ರಿ ಸ । ಸ ನಿ ಸಾ , ಗ ರಿ ರಿ ॥
ತ ಕ ತಾಂಕುದಣೋಂ ತ ರಿ ತಾ ದ ಣೋಂ ದ ರಿ ತಾಂ ತ ಕಿ ಟ ಝಣುತಾಂ ತ ದಿ ಗಿ

॥ ಸ ನಿ ರಿ ಸ ಸ ನಿ ದ ಸ ನಿ ನಿ ದ ಮ ನೀ ಸ ನಿ । ದಾ ಮದ ನೀ , ಸ । ನೀ ನಿ ದ ನೀ , ಸ ॥
ಣತೊಂತದಿಗಿಣತೊಂ ತ ದಿ ಗಿಣತೊಂ ತಾ ಕು ದ ಣೊಂದರಿ ತಾಂ ದ ಣೋಂದರಿ ತಾಂ ತ

॥ ನಿ ದ ಮ ದ ನೀ , ರಿ ಸ ಸ ನಿ ದ ಸ ನಿ ನಿ ದ । ಮ ನಿ ದ ದ ಮ ಗ ದಾ । ನಿ ದ ಮಾ ಗ ಮ ನೀ ॥
ಕಿ ಟ ಝಣುತಾಂ ತ ದಿ ಗಿಣತೊಂತ ದಿ ಗಿ ಣ ತೊಂತದಿ ಗಿಣತೊಂತಾಂ ಕುದ ಣೋಂದರಿ ತಾ

॥ , ನಿ ದಾ ಮ ದ ನೀ , ದ ನಿ ದ ಮ ದ ನೀ । , ನಿ ದ ದ ಮ ಗ ಪ ಮ । ಮ ಗ ರಿ ನಿಸ ಸಗಮ ॥
ದಣೊಂದ ರಿ ತಾಂ ತ ಕಿ ಟ ಝಣುತಾಂ ತ ದಿ ಗಿ ಣ ತೊಂತ ದಿ ಗಿಣತೊಂತದಿ ಗಿಣತೊಂ

* * *

## ೨೧

ರಾಗ : ಬೇಗಡೆ ತಾಳ : ಆದಿ ಎಣಿಕೆ : ಒಂದು ಕಳೆ

ಆರೋಹಣ : ಸ ಗ ರಿ ಗ ಮ ಪ ದ ಪ ಸಾ
ಅವರೋಹಣ : ಸ ನಿ ದ ಪ ಮಾ ಗ ರಿ ಸಾ

೨೯ನೇ ಮೇಳ ಶಂಕರಾಭರಣದಲ್ಲಿ ಜನ್ಯ
ಚ.ರಿಷಭ, ಅಂ.ಗಾಂಧಾರ, ಶು.ಮಧ್ಯಮ, ಚ.ಧೈವತ, ಕಾ.ನಿಷಾದ

### ಪಲ್ಲವಿ

॥ ಗ ಮ ಪ ದ ಪ ಸಾ ಸ । ರಿ ನಿ ೀ ನಿ ನಿ । ದ ದ ಪ ಪ ಮ ಗ ಮ ರಿ ॥
ನಾ ದಿರ್ ತ ನ ನ ಧೀಂ ತ ನ ಧೀಂ ತ ಕುಂ ತ ರಿ ಕಿ ಟ ತ ಕ ಧಿ ಮಿ

॥ ಗ ಮ ದಾ ಪಾ ಪ ದ ನೀ ದ ಪ ಗ ಮ ಗ ರಿ । ಸಾ ಸಾ , ಪ । ; ಮ ಪ ಮ ಗ ಮ ರಿ ॥
ನಾ ಧಿ ತ ನೋಂ ತ ನ ನ ಧೀಂ ತ ಧೀಂ ಝಣು ತ ಕ ಧಿ ಮಿ

### ಅನುಪಲ್ಲವಿ

॥ ಪಾ ದ ದ ಪ ಪ ಸಾ ರಿ ರಿ ಸ ಸ ಸ ಸ ಸ ಸ । ರಿ ಸ ನಿ ಸ ದ ಪ । ಪ ದಾ ಪ ಸಾ ॥
ಝಂತ ರಿ ಕಿ ಟ ಝಂ ತ ರಿ ಕಿ ಟ ತ ಕ ಝಣು ಧಿ ತ್ಲಾಂಕಿ ಟ ತ ಕ ತ ಧೀಂ ತ ತಾಂ

॥ ಸಾ ಗಾ ಗ ಮ ಗ ರಿ ಸ ರಿ ನೀ ದ ಪ ಪ ದ । ನೀ ದ ದ ಪ ದಪಾ । ಪಮಗ ಪ ಮ ಗ ಮ ರಿ ॥
ತ ದ್ಧೀಂತ ಕ ಝಣುತ ಕ ಣಂ ತ ರಿ ತ ದ್ದೀಂಗಿ ಣ ತೊಂತಧೀಂ ಗಿಣತೊಂ ತ ಧಿ ಗಿಣ ತೊಂ

### ಚರಣ

॥ ಪ ದ ನೀ ದ ಪ ಮ ಗ ಮ ಪ ಗ ರಿ ಸಾ । ಸ ಗ ರಿ ಗ । ಮ ಪ ದ ಪ ॥
ನಿ ನ್ನ ಮ ಹಿ ಮೆ ಯ ನು ಪೊ ಗ ಳ ಲ ಸ ದ ಳ ವು

॥ ಪ ದ ರಿ ನಿ ೀ ದ ಪಾ । , ದ ಪ ಸ । ನಿ ರಿ ಸಾ ॥
ತ್ರಿ ಮ ಕು ಟೇ ಶ್ವ ರಿ ಚೌ ಡೇ ಶ್ವ ರಿ

॥ ಸಾ , ರಿ ನಿ ರಿ ನೀ ದ ಪ ಮ ದ ಪ ಮ ಗ ರಿ । ಗಾ , ಮ ಪ ದ ಪ ಮ । ಮ ಪ ದ ಪ ಸಾ ॥
ತಾಂ ಕು ತ ಕ ಝಂತ ಕ ತ ಕ ಝಣುತ ಕ ಝಂ ತ ಧಿ ಮಿ ತ ಕ ತ ಕ ಝಣು ತಾಂ

॥ ಸ ಸ ಗ ರಿ ಗಾ ಗ ಮ ಗ ರಿ ಸ ನಿ ದ ಪ ದ ರಿ । ನೀ ೀ ದ ಪ ಮ ಪ ದ । ಮಾ , ಪ ಮ ಗ ಮ ರಿ ॥
ತ ನ ದಿ ರೆ ನಾ ತ ಕ ಣ ಕ ಝಣುತ ಕ ದ ರಿ ತೋಂ ತ ದಿ ನ ತ ನ ಧೀಂ ತ ದಿ ಗಿ ಣ ತೊಂ

* * *

## ೨೨

11 ರಾಗ : ಶಹನ ತಾಳ : ಆದಿ ಎಣಿಕೆ : ಒಂದು ಕಳೆ

ಆರೋಹಣ : ಸ ರಿ ಗ ಮ ಪ ಮ ದ ನಿ ಸ — ೨೮ನೇ ಮೇಳ ಹರಿಕಾಂಭೋಜಿಯಲ್ಲಿ ಜನ್ಯ

ಅವರೋಹಣ : ಸ ನಿ ದ ಪ ಮ ಗ ಮ ರಿ ಗ ರಿ ಸ — ಚ.ರಿಷಭ, ಅಂ.ಗಾಂಧಾರ, ಶು.ಮಧ್ಯಮ, ಚ.ದೈವತ, ಕೈ.ನಿಷಾದ

### ಪಲ್ಲವಿ

॥ ಸ ಸ ರಿ ಗಾ ರಿ ರಿ ॰ ರಿ ಗ । ಮ ಪ ಮ ಗ । , ಮ ರಿ ಗ ಗ ರಿ ॥
ದಿ ರೆ ನಾ ತ ನ ಧೀಂ ತ ಧೀಂ ತ ದಿ ರೆ

॥ ಸಾ ; ; ರಿ ನಿ ॰ ಸ । ದ ದ ಪ ಮ ನಿ ದ ಪ ಮ । ಪ ಗಾ ಮಾ ರಿ ॰ ಸ ॥
ನಾ ತ ಳಾಂ ಕು ತ ಕ ಧಿ ಮಿ ತ ಕ ಧಿ ಕು ತ ಧೀಂ ಗಿ ಣ್ಣಾ ತೊಂ

೧ ॥ ಸ ಸ ರಿ ಗಾ ರಿ ರಿ ॰ ರಿ ಗ । ದಾನಿದಪಾದಪ ಪಮಗಗ । ತ ದಿ ರೆ ॥
ಧಿ ರೆ ನಾ ತ ನ ಧೀಂ ತ ಧೀಂ

೨ ॥ ಸ ಸ ರಿ ಗಾ ರಿ ರಿ ॰ ರಿ ಗ ಮ ಪ । ದ ನಿ ಸಾ ಪಾ ಪ ಮ । , ಮ ರಿ ಗ ಗ ರಿ ॥
ಧಿ ರೆ ನಾ ತ ನ ಧೀಂ ತ ಧೀಂ ತ ದಿ ರೆ

॥ ಸಾ , ನಿ ಸ ರಿ ॰ ಸ ಸಾ ; । ; ; । ; ; ॥

### ಅನುಪಲ್ಲವಿ

॥ ಪಾ , ನಿ ದ ಪ ಮ ಪ ನಿ ದ ಪ ಮ ಗ ರಿ ಗ ಮ । ಪಾ , ನಿ ದ ಪ ಮ ಗ । ಮ ರಿ ॰ ಸಾ ರಿ ಗ ಮ ॥
ತಾಂ ತ ಕಿ ಟ ತ ಕ ಝುಣುತತಾಂ ಕು ಧಿಮಿ ತಾಂ ತ ಕ ಧಿ ಮಿ ಝು ಣುತಾಂ ತಾಂಕುದಿ ಮಿ

॥ ಪಾ ಪ ಮ ದಾ ದ ದ ನೀ ॰ ಸ ನಿ ಸ ದ ಪ ಮ । ದ ನಿ ಸ ಪಾ ಪ ನಿ ದ । ದ ಪ ಮ ಗ ಗ ಮ ರಿ ಸ ॥
ತಾಂಕು ತ ಣಂ ತ ಕ ಧೀಂ ತ ತ ಕ ಝುಣುತ ತಝು ಣುತಾಂಕು ತ ನ ಧಿ ರೆ ನ ಧೀಂ ದಿ ರೆ ನ

### ಚರಣ

॥ , ನಿ ದ ಪಾ ಮ ಗ ಮ । ಗಾ ಗ ಮ ರಿ ॰ ರಿ ॰ । ಗ ಮ ಪ ಪ ॥
ನ ನು ಬ್ರೋ ಚು ಟ ಕು ಇ ದೇ ಸ ಮ ಯ ಮು ರ

॥ ; ಪದ ಪದ ಮಾ , ಮ ದ ನಿ ಸ ರಿ । ದ ನೀ ೯ ದ ಪ ಮ ಮಾ । ಪ ಮ ಗ ಮ ರಿ ಸ ॥
ಸ ನ್ನ ತಾಂ ಗ ಶ್ರೀ ಪ್ರ ಸ ನ್ನ ಶ್ರೀ ರಾ ಮ

॥ ರೀ ೯ ರಿ ರಿ ರಿ ೯ ರಿ ರಿ ರಿ ೯ ಗ ಮ ಪಾ ಪ ದ । ಮಾ ಮ ಮ ಮಾ ಪ ಮ । ಗ ಮ ರಿ ಗಾ ಮ ರಿ ಸ ॥
ತಾ ಕುದ ಣಂ ದ ರಿ ತಾ ಕುದ ಣಂ ಧಿ ಮಿ ತಾಂ ಕುಜ ಣಂ ತ ಕ ದಿ ಕಿ ತ ಧೀಂ ಗಿ ಣ ತೊಂ

॥ ರಿ ೯ ರೀ ೯ ರಿ ರಿ ರಿ ೯ ರಿ ಗಾ ಮ ಪ ಪ ಪ ಪ । ಮ ದಾ ದ ನಿ ದ ಪ ಮ । ಮ ದಾ ನಿ ಸಾ ॥
ತ ದ್ದಿಂ ತ ಕ ಧೀಂ ತ ಧೀಂ ತ ತ ಕ ಧಿ ಮಿ ತ ಧೀಂ ತತ ಕ ಝಣು ತ ಧೀಂ ತ ತೊಂ

॥ ಸಾರಿಸ ಸ ಸ ರೀ ಗರಿ ರಿ ರಿ ರಿಗರಿಗ ಮ ಪಗ ಮ ರಿ ಸ। ನಿ ರಿ ಸ ನಿ ಸ ದ ಪ ಮ । ಗ ಮ ದ ನಿ ಸಾ , ರಿ ॥
ನಾದಿರ್ ತಾನಿ ತೊಂದಿರಿತಾನಿ ದಿರ್‌ದಿರ್ ತಾನಿ ತಾನಿ ತಾನೀ ತ ಕಿ ಟ ತ ಕ ಝಣುತ ತ ಧಿಂ ಗಿ ಣ ತೊಂ ತ

॥ , ಸಾ ನಿ ೯ ನಿ ೯ ಸ ದಾ , ನಿ ೯ ದಾ ಪ । , ಪಾ ಮ ಪಾ , ಮ । , ಗಾ ಮಾ ರಿ ೯ ಸ ॥
ಧೀಂ ಗಿ ಣ್ಣಾ ತೊಂತಾಂ ತ ಧೀಂ ಗಿ ಣ್ಣಾ ತೊಂತಾಂ ತ ಧ್ಧೀಂಗಿ ಣ್ಣಾ ತೊಂ

* * *

# ರಾಗ ಲಕ್ಷಣ

## ೧. ಉದಯರವಿಚಂದ್ರಿಕ:

ಇದು ೨೦ನೇ ಮೇಳ ನಠಭೈರವಿಯಲ್ಲಿ ಜನ್ಯ. ಉಪಾಂಗ ಔಡವ ರಾಗ. ಇದನ್ನು ವೆಂಕಟಮಖಿಯವರು ಶುದ್ಧಧನ್ಯಾಸಿ ಎಂದು ಕರೆದಿರುವರು. ಷಡ್ಜ ಗ್ರಹ. ಉದಯಕಾಲದಲ್ಲಿ ಹಾಡುವ ರಾಗ. ಬಹು ಜನಪ್ರಿಯವಾದ ರಾಗ.

ಸಂಚಾರ: ಗ ಮ ಪಾ | ನಿ ಸ ಮ ಗ ಮ ಪಾ | ನೀ ಪಾ ನೀ ಥಾ ನಿ ಥಾ ಸ ನಿ ಸಾ | ಸ ಗ ಸ ಮ ಮ ಗ ಸಾ | ನಿ ಪ ಮ ಗ ಗ ಸಾ | ನಿ ನಿ ಸ ಗ ಗ ಮ | ಪ ನಿ ಸ ಪಾ | ನಿ ಸ ಮ ಗ ಸಾ | ಸಾ ನಿ ಪಾ, ನಿ ಪ ಪ ಮ ಗಾ | ಮ ಗ ಪ ಮ ನಿ ನಿ ಪ ಮ ಗಾ | ಗ ಪ ಮ ಮ ಗ ಸಾ | ನಿ ಸ ನಿ ಥಾ ಮ ಥ ಸ ನಿ ಸಾ ||

## ೨. ಧನ್ಯಾಸಿ

ಇದು ೮ನೇ ಮೇಳ ಹನುಮತೋಡಿಯಲ್ಲಿ ಜನ್ಯ. ಔಡವ ಸಂಪೂರ್ಣ ರಾಗ. ಪ್ರಾತಃಕಾಲೀನ ರಾಗ. ಸಾಧಾರಣ ಗಾಂಧಾರ, ಕೈಶಿಕಿ ನಿಷಾದಗಳು ರಾಗದ ಜೀವಸ್ವರಗಳು. ಈ ರಾಗವನ್ನು ವೆಂಕಟಮಖಿ ೨೨ನೇ ಮೇಳದಲ್ಲಿ ಜನ್ಯವೆಂದು ಹೇಳಿರುವರು. ೨೦ನೇ ಮೇಳದಲ್ಲಿರುವ ಚ.ರಿಷಭವು ಪ್ರಯೋಗದಲ್ಲಿ ಕಂಡುಬರುವುದಿಲ್ಲ. 'ಧ ಪ ಗಾ ರಿ ಸ' ಈ ರಾಗಕ್ಕೆ ವಿಶೇಷ ಪ್ರಯೋಗ.

ಸಂಚಾರ:—ಮ ಗಾ ರಿ ಸ | ಮ ಗಾ ಮ ಪಾ | ಪ ನಿ ಸಾ ನಿ ದ ಪ ಮ ಗಾ | ದ ಪ ಮ ಗ ರಿ ಸ | ನಿ ಸ ಮ ಗಾ | ಗ ರಿ ಸ ನಿ ಧ ಪ ನೀ | ಸ ನಿ ಧ ಪ ನಿ ನಿ ಸಾ ||

## ೩. ಕೇದಾರಗೌಳ

ಇದು ೨೮ನೇ ಮೇಳ ಹರಿಕಾಂಭೋಜಿಯಲ್ಲಿ ಜನ್ಯ. ಔಡವ–ಸಂಪೂರ್ಣ ರಾಗ. ನಿಷಾದ ಗ್ರಹ, ರಕ್ತಿ ರಾಗ. ರಿಷಭ, ಮಧ್ಯಮ ನಿಷಾದ ಮತ್ತು ಗಾಂಧಾರ, ವಿಶೇಷ ರಂಜನೆಯನ್ನುಂಟುಮಾಡುವ ಸ್ವರಗಳು. ರಿಷಭ ನ್ಯಾಸ ಸ್ವರ. ಸಾಯಂಕಾಲದಲ್ಲಿ ಹಾಡುವ ರಾಗ. ದೈನ್ಯ ಮತ್ತು ಶೃಂಗಾರರಸವನ್ನು ಸೂಚಿಸುವ ಈ ರಾಗದಲ್ಲಿ ಕೃತಿ, ಪದ ಮುಂತಾದ ಗೇಯ ಕಲ್ಪನೆಗಳು ಹೆಚ್ಚಾಗಿ ಕಾಣಬಹುದು.

ಸಂಚಾರ:—ನೀ ರೀ ರೀ | ನಿ ಸ ರಿ ಮ ಗ ರಿ ಗ ರೀ | ಸ ನಿ ಧ ಪ ಮ ಪ | ನಿ ಸ ರಿ ಮಾ ಗ | ರಿ ಗ ರಿ ಸ ನಿ ರಿ ಸಾ | ಮ ಗ ರಿ ಗ ರಿ ಸಾ | ರಿ ಮ ಪಾ | ಮ ಪ ನೀ ಸಾ | ನಿ ದ ಪ ನಿ ಸ ರೀ | ನಿ ಸ ರೀ ಮ ಗ ರಿ ಗ ರೀ | ಪ ಮ ಪ ದ ಪಾ | ಮ ಗ ಗ ರಿ ಸಾ | ಸ ನಿ ರೀ ಸಾ | ನಿ ಧ ಪ ನೀ ಸಾ ||

## ೪. ಬಿಲಹರಿ

ಇದು ೨೯ನೇ ಮೇಳ ಧೀರಶಂಕರಾಭರಣದಲ್ಲಿ ಜನ್ಯ. ಔಡವ-ಸಂಪೂರ್ಣ. ಭಾಷಾಂಗ ರಾಗ. ಗಮಕ ವರೀಕ ರಕ್ತಿ ರಾಗ. ಚ.ರಿಷಭ, ಚ.ದೈವತ ಮತ್ತು ಕಾಕಲಿ ನಿಷಾದಗಳು ಈ ರಾಗದ ಛಾಯಾ ಸ್ವರಗಳು. 'ದ ನಿ ದ' ಎಂಬ ಪ್ರಯೋಗ ದಲ್ಲಿ ಕೈ.ನಿಷಾದ ಬರುವುದುಂಟು. ಸಂಗಮಕಾಲದಲ್ಲಿ ಅಂದರೆ ಬೆಳಗ್ಗೆ 8 ಘಂಟೆಯಿಂದ 9 ಘಂಟೆಯವರೆಗೆ ಹಾಡತಕ್ಕ ರಾಗ.

ಸಂಚಾರ:—ರಿ ಗ ಪ ಮ ಗ ರಿ ಸಾ | ಗ ರಿ ಸ ನಿ ಧ ಧ ಸಾ | ಮ ಗ ರಿ ಗ ಪಾ | ದ ದ ಸಾ | ಮ ಗ ಪ ದ ಸಾ | ಮ ಗ ದ ಪಾ | ದ ಸ ರಿ ಗ ಸಾ | ರಿ ಗ ಪ ಮ ಗ ರಿ ಸಾ | ಪ ದ ನಿ ಪ ದ ಪಾ | ರಿ ಗ ಪ ಮ ಗ ರೀ | ಸ ನಿ ದ ಪ ಧ ಸಾ |

## ೫. ಬಹುದಾರಿ

ಇದು ೨೮ನೇ ಮೇಳ ಹರಿಕಾಂಭೋಜಿಯಲ್ಲಿ ಜನ್ಯ. ಷಾಡವ–ಔಡವ. ಉಪಾಂಗ ರಾಗ. ಅಂತರ ಗಾಂಧಾರ, ಕೈಶಿಕಿ ನಿಷಾದಗಳು ರಾಗದ ಛಾಯಾಸ್ವರಗಳು. ರಂಜನೀಯವಾದ ಸರ್ವಕಾಲೀನ ರಾಗ.

ಸಂಚಾರ : ಪ ದ ನಿ ಪ ಮ ಗಾ । ಗ ಪ ಮ ಗ ಸಾ । ಗ ಮ ಪ ದ ನಿ ಸ̇ಾ। ನಿ ಸ̇ ಗ̇ ಸ̇ ಗ̇ಾ । ಗ̇ ಪ̇ ಮ̇ ಗ̇ ಸ̇ಾ। ಸ̇ ನಿ ಪಾ । ಮ ಪ ದ ನಿ ಪಾ । ಮ ಪ ಗ ಪ ಮ ಗ ಪಾ। ಸ ನ̣ಿ ಫ̣ಾ । ಧ̣ ನ̣ಿ ಸ ಸ ಗಾ । ಗ ಮ ಪ ಮ ಗಾ । ಸ ಗ ಸಾ । ನ̣ಿ ಧ̣ ನ̣ಿ ಫ̣ಾ ಧ̣ ನ̣ಿ ಸಾ ॥

## ೬. ಶುಭಪಂತುವರಾಳಿ

ಇದು ೪೫ನೇ ಜನಕ ರಾಗ. ಗಮಕ, ವರ್ಜಕ ರಕ್ತಿರಾಗ. ಮೂರ್ಛನಾಕಾರಕ ಮೇಳ. ಈ ರಾಗದ ದೈವತ ಗ್ರಹದಿಂದ ೩೬ನೇ ಚಲನಾಟ ರಾಗದ ಮೂರ್ಛನೆ ಉಂಟಾಗುತ್ತದೆ. ಸಾಯಂಕಾಲೀನ ರಾಗ. ಗಾಂಧಾರ, ದೈವತಗಳು ರಾಗದ ಛಾಯಾ ಸ್ವರಗಳು.

ಸಂಚಾರ : ಪ ಮ ಗಾ । ಗ ರಿ ಸ ನ̣ಿ ಸಾ । ರಿ ಸ ನ̣ಿ ಸ ಧ̣ಾ । ಧ̣ ನ̣ಿ ಸ ರಿ ಗಾ । ನ̣ಿ ಸ ನ̣ಿ ಗ ರಿ ಗ । ರೀ ನ̣ಿ ಸ ರಿ ಸ ಧ̣ಾ । ನ̣ಿ ಸ ರಿ ಗಾ । ದ ನಿ ಮಾ । ದ ನಿ ಸ̇ ರ̇ಿ ಗ̇ಾ । ಮ̇ಾ ಗ̇ಾ ಗ̇ ರ̇ೀ । ಸ̇ ನಿ ಸ̇ಾ ರ̇ಿ ನಿ ಸ̇ಾ । ದ ನಿ ರ̇ಿ ನಿ ದ ಮಾ । ಗಾ ಮಾ ದ ಮ ಗಾ । ರಿ ಗ ರೀ । ನ̣ಿ ಸ ರಿ ಸಾ ।

## ೭. ಸಾವೇರಿ

೧೫ ನೇ ಮೇಳ ಮಾಯಾಮಾಳವಗೌಳದಲ್ಲಿ ಜನ್ಯ. ಔಡವ-ಸಂಪೂರ್ಣ. ಉಪಾಂಗ. ರಕ್ತಿ ರಾಗ. ಷಡ್ಜ ಗ್ರಹ. ಇದು ಸರ್ವಕಾಲೀನ ರಾಗವೆಂದು ಮತ್ತು ಕೆಲವರು ಸಂಜೆ 6 ರಿಂದ ರಾತ್ರಿ 9 ಘಂಟೆವರೆವಿಗೂ ಹಾಡಬೇಕಾದ ರಾಗವೆಂದು ಅಭಿಪ್ರಾಯ ಪಟ್ಟಿರುವರು. ಇದು ಬೆಳಿಗ್ಗೆ ಹಾಡುವ ಪದ್ಧತಿ ಬಳಕೆಯಲ್ಲಿದೆ. ಗಾಂಧಾರ ದೈವತಗಳು ರಾಗದ ಛಾಯಾ ಸ್ವರಗಳು. ಗಾಂಧಾರ ನಿಷಾದಗಳು ತನ್ನ ನಿಯತ ಶ್ರುತಿಗಿಂತಲೂ ಸ್ವಲ್ಪ ಕಮ್ಮಿಯಾಗಿ ಹಾಡಿದ ಹೊರತು ರಾಗದ ಕಳೆ ಸ್ಫುರಿಸುವುದಿಲ್ಲ. ಪ್ರೌಢರೀತಿಯಲ್ಲಿ ಪ್ರದರ್ಶಿಸಲು ಯೋಗ್ಯವಾದ ರಾಗ.

ಸಂಚಾರ : ರೀ ರಿ ಸ ರೀ । ಗ ರಿ ರೀ ಸ ನ̣ಿ ಧ̣ ಧ̣ । ಧ̣ ಸ ರಿ ಸ ರೀ । ಸ ರಿ ಗ ಗ ರೀ ಸಾ । ರಿ ಮ ಗ ರಿ ಸ ರಿ ಮ ಪಾ । ದ ಮ ಗ ರಿ । ಸ ನ̣ಿ ಧ̣ ಸಾ । ಧ̣ ರಿ ಸ ಧ̣ ಸ ಸ ರಿ ಸ ರೀ । ರಿ ಸ ರೀ ಮಾ । ಪ ದ ಸ̇ಾ । ಮ̇ ಗ̇ ರ̇ೀ । ಸ̇ ನಿ ದ ಮ ಗ ರಿ ಸಾ । ರಿ ಸ ರೀ । ಸ ನ̣ಿ ಧ̣ ಮ̣ ಪ̣ ಧ̣ ಸಾ ॥

## ೮. ನಾಟಕುರಂಜಿ

ಇದು ೨೮ನೇ ಮೇಳ ಹರಿಕಾಂಭೋಜಿಯಲ್ಲಿ ಜನ್ಯ. ವಕ್ರ ಸಂಪೂರ್ಣ–ಔಡವ ರಾಗ. ಗಾಂಧಾರ, ಮಧ್ಯಮ ನಿಷಾದಗಳು ರಾಗದ ಛಾಯಾ ಸ್ವರಗಳು. ಗಮಕ, ವರ್ಜಕ ರಕ್ತಿರಾಗ. ಮ ಗ ರಿ ಸ, ಸ̇ ದ ಪ ಮ, ಗ ಮ ಪ ಗ ರಿ ಸ ವಿಶೇಷ ಪ್ರಯೋಗಗಳು. ಸಾಯಂಕಾಲೀನ ರಾಗ. ಕರುಣ ಮತ್ತು ಭಕ್ತಿರಸವನ್ನು ಸೂಚಿಸುವ ರಾಗ.

ಸಂಚಾರ : ನ̣ಿ ಧ̣ ನ̣ಿ ಪ̣ ಧ̣ ನ̣ಿ ಸಾ । ನಿ ಸ ರಿ ಗ ಸಾ । ಗ ಮ ಪ ಗ ರಿ ಸಾ । ರಿ ಸ ನ̣ೀ । ಸಾ ಮ ಗ ಮಾ । ಗ ಮ ನಿ ದ ನಿ ಪಾ । ದ ನಿ ಪ ದ ನಿ ಸ̇ಾ । ರ̇ಿ ಗ̇ ಮ̇ ಗ̇ ಸ̇ಾ । ಸ̇ ನಿ ಗ̇ ರ̇ಿ ಸ̇ ನಿ । ಸ̇ ದ ಪ ಮ ಗ ಮ ಪ ಗ ರಿ ಸಾ । ಗ ಗ ಮ ಪ ಗ ಮ । ರಿ ಗ ಮ ಗ ರಿ ಗ ಸಾ । ನ̣ಿ ಸ ರಿ ಸ ನ̣ಿ ಧ̣ಾ । ಧ̣ ನ̣ಿ ಸ ರಿ ನ̣ೀ । ನ̣ಿ ಸ ಧ̣ಾ ನ̣ಿ ಪ̣ । ಧ̣ ನ̣ಿ ಧ̣ ನ̣ಿ ಸ ರೀ ಸಾ ॥

## ೯. ಕಲ್ಯಾಣಿ

ಇದು ೬೫ನೇ ಜನಕರಾಗ. ಸರ್ವ ಸ್ವರ ಗಮಕ ವರೀಕ ರಕ್ತಿರಾಗ. ಷಡ್ಜಗ್ರಹ. ಗಾಂಧಾರ, ರಿಷಭಗಳು ನ್ಯಾಸ ಸ್ವರಗಳು ಮತ್ತು ರಂಜನೆಯನ್ನು ಹೆಚ್ಚಾಗಿ ಕೊಡುವ ಸ್ವರಗಳಾಗಿವೆ. ಗ ನೀ, ಗ ದಾ, ರಿ ದಾ, ದ ರೀ, ದ ಗಾ, ನಿ.ದಾ. ನಿ ರೀ ಗಾ ಮುಂತಾದ ದಾಟುಸ್ವರಗಳು. ಗ ಮ ದ ಮ ಗ ರೀ, ನೀ ದ ಮ ಗ ರೀ, ದ ನಿ ರಿ ನಿ ದ ಮ ದ, ದ ಗ ರಿ ನಿ ದ ಮ ಗ ರೀ ಮುಂತಾದ ಪ್ರಯೋಗಗಳು ರಾಗಕ್ಕೆ ಹೆಚ್ಚು ಪೋಷಕವಾಗಿರುತ್ತವೆ. ವಿಸ್ತಾರವಾದ ವ್ಯಾಪ್ತಿಯನ್ನು ಹೊಂದಿರುವ ಈ ಸುಂದರವಾದ ರಾಗವನ್ನು ಎಲ್ಲಾ ಕಾಲಗಳಲ್ಲೂ ಹಾಡಬಹುದು.

## ೧೦. ಅಭೇರಿ

ಇದು ೨೦ನೇ ಮೇಳ ನಠಭೈರವಿಯಲ್ಲಿ ಜನ್ಯ. ಔಡವ–ಸಂಪೂರ್ಣ, ಸಾಧಾರಣ ಗಾಂಧಾರ, ಶುದ್ಧ ಮಧ್ಯಮ, ಕೈಶಿಕಿ ನಿಷಾದಗಳು ರಾಗದ ಛಾಯಾ ಸ್ವರಗಳು. ಅವರೋಹಣದಲ್ಲಿ ಚ.ದೈವತವನ್ನು ಹಾಡುವುದೇ ಬಳಕೆಯಲ್ಲಿ ಕಂಡುಬರುತ್ತದೆ. ಇದು ೨೨ನೇ ಖರಹರಪ್ರಿಯದಲ್ಲಿ ಜನ್ಯವೆಂದು ಹೇಳುವುದು ಯುಕ್ತವಾಗಿದೆ. ಸಾಧಾರಣ ಗಾಂಧಾರ, ಶುದ್ಧ ಮಧ್ಯಮ, ಕೈಶಿಕಿ ನಿಷಾದಗಳು ರಾಗದ ಛಾಯಾ ಸ್ವರಗಳು. ಈ ರಾಗವನ್ನು ಕರ್ಣಾಟಕ ದೇವಗಾಂಧಾರಿ ಎಂತಲೂ ಕರೆಯುವುದುಂಟು. ಸಾಯಂಕಾಲೀನ ರಾಗ.

ಸಂಚಾರ : ನಿ ಸ ಗಾ ರೀ ಸಾ। ಗ ಮ ಪಾ। ಮ ಪ ಮ ನೀ ದಾ ಪಾ। ಮ ಪ ಗಾ। ಗ ಮ ಪ ನಿ ಸಾ। ನಿ ಸ ಮ ಗ ರಿ ಸಾ। ನಿ ಸ ರಿ ನಿ ಸಾ ನಿ ದ ಪಾ। ನಿ ಪ ಗಾ। ಗ ರಿ ನೀ ಸಾ॥

## ೧೧. ಸಾರಂಗ

ಇದು ೬೫ನೇ ಮೇಳ ಮೇಚಕಲ್ಯಾಣಿಯಲ್ಲಿ ಜನ್ಯ. ಭಾಷಾಂಗ ರಾಗ, ಷಡ್ಜಗ್ರಹ. ಆರೋಹಣ ಕ್ರಮ ಸಂಪೂರ್ಣ. ಅವರೋಹಣ ವಕ್ರ ಸಂಪೂರ್ಣ. ಈ ರಾಗದ ರಿಷಭ, ಗಾಂಧಾರ, ದೈವತ ಸ್ವರಗಳು ರಾಗಕ್ಕೆ ರಂಜನೆಯನ್ನುಂಟುಮಾಡುವ ಸ್ವರಗಳಾಗಿವೆ. 'ರಿ ಗ ಮ ರಿ ಸ' ಈ ಪ್ರಯೋಗದಲ್ಲಿ ಶುದ್ಧಮಧ್ಯಮ ಬರುತ್ತದೆ. ಎಲ್ಲಾ ಕಾಲಗಳಲ್ಲೂ ಹಾಡುವಂತಹ ರಾಗ. ತಾರಸ್ಥಾಯಿ ಗಾಂಧಾರದವರೆವಿಗೂ ಸಂಚಾರ ಕಂಡುಬರುತ್ತದೆ.

ಸಂಚಾರ : ರಿ ಗಾ। ದ ಪಾ ಮ। ರೀ ಗ ಮ ರೀ। ಸ ಪಾ ಮ ನೀ ದಾ ಪಾ। ಗ ನಿ ದ ಪ ಮ। ಸ ನಿ ಸ ದಾ ಮ ಪ ದ ನಿ ಸ। ನಿ ಸ ಗ ರಿ ಸ ದಾ। ನಿ ಸ ದ ನಿ ದ ಪ। ರಿ ಗ ಮ ಗ ರೀ। ಸ ನಿ ಧ ನಿ ಸ ರೀ। ನಿ ಸ ಧ ನಿ ಸಾ॥

## ೧೨. ವಿಜಯನಾಗರಿ

ಇದು ೫೯ನೇ ಮೇಳ ಧರ್ಮವತಿಯಲ್ಲಿ ಜನ್ಯ. ಷಾಡವ. ಷಡ್ಜ ಗ್ರಹ. ಮಿತವ್ಯಾಪ್ತಿಯುಳ್ಳ ರಾಗ.

## ೧೩. ಖರಹರಪ್ರಿಯ

ಇದು ೨೨ನೇ ಜನಕ ರಾಗ. ಆರೋಹಣದಲ್ಲಿ ಸಾಧಾರಣ ಗಾಂಧಾರ, ಚತುಶ್ರುತಿ ದೈವತ ಮತ್ತು ಅವರೋಹಣದಲ್ಲಿ ಕೈಶಿಕಿ ನಿಷಾದ, ಶುದ್ಧ ಮಧ್ಯಮಗಳು ರಾಗದ ಛಾಯಾ ಸ್ವರಗಳು. ಈ ರಾಗವನ್ನು ತ್ಯಾಗರಾಜರು ಬಳಕೆಗೆ ತಂದರು. ಎಲ್ಲಾ ಕಾಲಗಳಲ್ಲೂ ಹಾಡಬಹುದು. ಹೆಚ್ಚು ವ್ಯಾಪ್ತಿಯುಳ್ಳ ರಂಜನೀಯವಾದ ರಾಗ.

ಸಂಚಾರ : ಸ ರಿ ಗ ರಿ ಸಾ। ಧ ನಿ ಸ ದ ನಿ ಪಾ। ಧಾ ನಿ ಸ ರೀ। ನಿ ಸ ರಿ ಗ ಮಾ ರೀ। ಗ ಮ ಗಾ ರೀ। ನಿ ದ ಪ ದ ಮ ದ ಪ ಮ ಗಾ। ರಿ ಗ ಗ ಮ ಮ ಪ। ಮ ನಿ ದ ನಿ ಪಾ। ದ ನಿ ಗ ರಿ ಸಾ। ರಿ ಗ ಮಾ ಗಾ ರೀ। ನೀ ಗಾ ರೀ ನೀ ಸಾ। ನಿ ದ ಮ ಪ ಗಾ ರೀ। ಧಾ ನೀ ಧಾ ಧಾ। ನೀ ರೀ ನೀ ಸಾ॥

## ೧೪. ತೋಡಿ

ಇದು ೮ನೇ ಜನಕ ರಾಗ, ಷಡ್ಜ ಗ್ರಹ. ರಕ್ತಿ ರಾಗ. ಸಾಯಂಕಾಲದಲ್ಲಿ ಹಾಡುವ ರಾಗ. ಗಾಂಧಾರ, ಮಧ್ಯಮ, ಧೈವತಗಳು ರಾಗದ ಛಾಯಾ ಸ್ವರಗಳು. ಈ ರಾಗವು ಔತ್ತರ ರಾಗವೆಂದು ವೆಂಕಟಮುಖಿಯವರು ಉಲ್ಲೇಖಿಸಿರುವರು. ತುರುಷ್ಕ ತೋಡಿ ಎಂತಲೂ ಕರೆಯುವುದುಂಟು. ರಕ್ತಿರಾಗಗಳಲ್ಲಿ ಬಹು ರಂಜನೀಯವಾದ ಈ ರಾಗದಲ್ಲಿ ಹೆಚ್ಚಿನ ಕೃತಿ ಗೇಯ ಕಲ್ಪನೆಗಳು ಕಂಡುಬರುವುದರಿಂದ ಇದು ಬಹಳ ಹಿಂದಿನಿಂದಲೂ ಪಸಿದ್ಧವಾದ ರಾಗವೆಂದೇ ಹೇಳಬಹುದು. ಪಂಚಮ ವರ್ಜ್ಯ ಮಾಡಿ ಹಾಡುವುದರಿಂದಲೇ ಈ ರಾಗವು ರಂಜಿಸುತ್ತದೆ.

ರಾಗರಂಜಕ ಪ್ರಯೋಗಗಳು : ಗ ಮ ದ ಧ ಮ ಗಾ । ಗ ದ ಮ ಗ ರಿ ಸಾ । ಸ ಮಾ ಗ ರಿ ಸಾ । ದ ನಿ ಗ ರಿ ಗಾ । ಮ ದ ನಿ ರಿ ನಿ ದಾ । ರಿ ನಿ ದ ಮ ಗ ರೀ । ನ಼ಿ ರಿ ಮ ಗಾ ರಿ ಸಾ । ರಿ ಸ ಧ಼ಾ । ನ಼ಿ ಗ ರಿ ನ಼ಿ ಧ಼ಾ । ನ಼ಿ ರಿ ಸಾ ॥

## ೧೫. ಕುಂತಲವರಾಳಿ

ಇದು ೨೮ನೇ ಮೇಳ ಹರಿಕಾಂಭೋಜಿಯಲ್ಲಿ ಜನ್ಯ. ವಕ್ರ ಔಡವ ರಾಗ. ಶುದ್ಧಮಧ್ಯಮ, ಕೈಶಿಕಿನಿಷಾದಗಳು ರಾಗದ ಜೀವಸ್ವರಗಳು. ಮಿತವ್ಯಾಪ್ತಿಯುಳ್ಳ ರಾಗ.

## ೧೫. ಕಾಂಭೋಜಿ

ಇದು ೨೮ನೇ ಮೇಳ ಹರಿಕಾಂಭೋಜಿಯಲ್ಲಿ ಜನ್ಯ. ಷಾಡವ-ಸಂಪೂರ್ಣ. 'ಸ ನಿ ಪ ದ ಸಾ' ಎಂಬ ಪ್ರಯೋಗದಲ್ಲಿ ಕಾಕಲಿ ನ಼ಿಷಾದ ಮತ್ತು ಅವರೋಹಣದಲ್ಲಿ ಕೈ. ನಿಷಾದಗಳು ರಾಗದ ಛಾಯಾ ಸ್ವರಗಳು. ಸರ್ವ ಸ್ವರ ಗಮಕ ವರೀಕ ರಾಗ. ಎಲ್ಲಾ ಕಾಲಗಳಲ್ಲೂ ಹಾಡಬಹುದಾದ ರಕ್ತಿರಾಗ.

ಸಂಚಾರ : ಸ ನ಼ಿ ಪ಼ ದ ಸಾ । ನ಼ಿ ಧ಼ ಪ಼ ಧ಼ ಸ ರೀ । ರಿ ಪ ಮ ಗ ಸಾ । ಮ ಗ ಮ ಪಾ । ದ ಸೆ ರಿ ಸ ನೀ ದಾ । ಗ ರಿ ಮ ಗ ಸಾ । ದ ದ ಸ ಸ ರೀ । ರಿ ಸ ಗ ರಿ ಮ ಗ ಸಾ । ದ ರಿ ನೀ ದಾ । ಮ ದ ಪ ಮ ಗ ರೀ । ರಿ ಗ ಸಾ । ನಿ ಪ಼ ಧ಼ಾ ಸಾ ॥

## ೧೬. ಆನಂದಭೈರವಿ

ಇದು ೨೦ನೇ ಮೇಳ ನಠಭೈರವಿಯಲ್ಲಿ ಜನ್ಯ. ಭಾಷಾಂಗ ರಾಗ. ವಕ್ರಷಾಡವ-ಸಂಪೂರ್ಣ. ಸಾಧಾರಣ ಗಾಂಧಾರ, ಕೈಶಿಕಿ ನಿಷಾದಗಳು ರಾಗದ ಛಾಯಾ ಸ್ವರಗಳು. ಕಾಕಲಿನಿಷಾದ ಮತ್ತು ಅಂತರಗಾಂಧಾರ ಪ್ರಯೋಗಗಳು ಈ ರಾಗದಲ್ಲಿ ಹಾಡುವ ವಾಡಿಕೆ ಈಚೆಗೆ ಬಂದದ್ದು.

ಸಂಚಾರ : ಪ ದ ನಿ ಪ । ಪ ನಿ ದ ನಿ । ನಿ ಸೆ ರೀ ಸಾ । ಗ ಮ ಪಾ ಮ ಮಾ ಮುಂತಾದ ಪ್ರಯೋಗಗಳು ಬಳಕೆ ಯಲ್ಲಿ ಕಂಡುಬರುತ್ತದೆ.

* * *